|| ಕಾಲೀಯ ಉವಾಚ ||

ತವಾಷ್ಟಗುಣಮೈಶ್ವರ್ಯಂ ನಾಥ ಸ್ವಾಭಾವಿಕಂ ಪರಂ ।
ನಿರಸ್ತಾತಿಶಯಂ ಯಸ್ಯ ತಸ್ಯ ಸ್ತೋಷ್ಯಾಮಿ ಕಿನ್ವಹಂ || ೪೪ ||

ತ್ವಂ ಪರಸ್ತ್ವಂ ಪರಸ್ಯಾದ್ಯಃ ಪರಂ ತ್ವಂ ತತ್ಪರಾತ್ಮಕಂ ।
ಪರಸ್ಮಾತ್ಪರಮೋ ಯಸ್ತ್ವಂ ತಸ್ಯ ಸ್ತೋಷ್ಯಾಮಿ ಕಿನ್ವಹಂ || ೪೫ ||

ಯಥಾಹಂ ಭವತಾ ಸೃಷ್ಟೋ ಜಾತ್ಯಾ ರೂಪೇಣ ಚೇಶ್ವರಃ ।
ಸ್ವಭಾವೇನ ಚ ಸಂಯುಕ್ತಸ್ತಥೇದಂ ಚೇಷ್ಟಿತಂ ಮಯಾ || ೪೬ ||

ಯದ್ಯನ್ಯಥಾ ಪ್ರವರ್ತೇಯ ದೇವದೇವ ತತೋ ಮಯಿ ।
ನ್ಯಾಯ್ಯೋ ದಂಡನಿಪಾತಸ್ತೇ ತವೈವ ವಚನಂ ಯಥಾ || ೪೭ ||

ತಥಾಪಿ ಯಂ ಜಗತ್ಸ್ವಾಮೀ ದಂಡಂ ಪಾತಿತವಾನ್ಮಯಿ ।
ಸ ಸೋಢೋಽಯಂ ವರೋ ದಂಡಸ್ತ್ವತ್ತೋ ನಾನ್ಯೋಽಸ್ತು ಮೇ ವರಃ ||

---

೪೪. ಓ ಸ್ವಾಮಿ, ನಿನ್ನ ಅಷ್ಟಗುಣೈಶ್ವರ್ಯವು ಸ್ವಾಭಾವಿಕವಾದರೂ ಅತ್ಯುತ್ತಮವಾದುದು. ಇಂತಹ ಗುಣಿಯಾದ ನಿನ್ನನ್ನು ನಾನೆಂತು ಸ್ತುತಿಸಲಿ?

೪೫ ನೀನು ಪರಮ ಶ್ರೇಷ್ಠನು ಪರಕ್ಕಿಂತಲೂ ಆದ್ಯನು. ಪರಾತ್ಪರ ಸ್ವರೂಪನು. ಪರಕ್ಕಿಂತಲೂ ಶ್ರೇಷ್ಠನು. ಇಂತಹ ನಿನ್ನನ್ನು ಸ್ತೋತ್ರ ಮಾಡಲು ಹೇಗೆತಾನೇ ಸಮರ್ಥನು?

೪೬. ಸೃಷ್ಟಿಕರ್ತನಾದ ನೀನು ನನ್ನನ್ನು ಸೃಷ್ಟಿಸಿದೆ. ಅದರಂತೆಯೇ ನಾನು ನನ್ನ ಜಾತಿಗೂ, ರೂಪಕ್ಕೂ, ಸ್ವಭಾವಕ್ಕೂ ಅನುಸಾರವಾಗಿ ವರ್ತಿಸಿ ದೆನು. ನಿನ್ನ ಸೃಷ್ಟಿಗೆ ವಿರುದ್ಧವಾಗಿ ನಾನೇನೂ ನಡೆದಿಲ್ಲ.

೪೭. ನಿನ್ನ ಸೃಷ್ಟಿಗೆ ವಿರುದ್ಧವಾಗಿ ನಡೆದಿದ್ದರೆ ಆಗ ನೀನು ನನಗೆ ಶಿಕ್ಷೆಯನ್ನು ಕೊಡುವುದು ನ್ಯಾಯವಾದುದು. ನಿನ್ನ ವಚನದಂತೆಯೇ ನಾನು ನಡೆದಿರುವಾಗ ಇದಾವ ನ್ಯಾಯವು.

೪೮-೪೯. ಆದರೂ ಜಗತ್ಸ್ವಾಮಿಯಾದ ನೀನು ನನಗೆ ಶಿಕ್ಷೆ ವಿಧಿಸು ತ್ತಿರುವುದರಿಂದ ಅದನ್ನು ಸಹಿಸಲೇ ಬೇಕಾಗಿದೆ. ಅದೀಗ ನನಗೆ ವರರೂಪ

**ಹತವೀರ್ಯೋ ಹತವಿಷೋ ದಮಿತೋಽಹಂ ತ್ವಯಾಚ್ಯುತ ।**
**ಜೀವಿತಂ ದೀಯತಾಮೇಕಮಾಜ್ಞಾಪಯ ಕರೋಮಿ ಕಿಂ ॥ ೪೯ ॥**

**॥ ಶ್ರೀಭಗವಾನುವಾಚ ॥**

**ನಾತ್ರ ಸ್ಥೇಯಂ ತ್ವಯಾ ಸರ್ಪ ಕದಾಚಿದ್ಯಮುನಾಜಲೇ ।**
**ಸಭೃತ್ಯಪರಿವಾರಸ್ತ್ವಂ ಸಮುದ್ರಸಲಿಲಂ ವ್ರಜ ॥ ೫೦ ॥**

**ಮತ್ಪದಾನಿ ಚ ತೇ ಸರ್ಪ ದೃಷ್ಟ್ವಾ ಮೂರ್ಧನಿ ಸಾಗರೇ ।**
**ಗರುಡಃ ಪನ್ನಗರಿಪುಸ್ತ್ವಯಿ ನ ಪ್ರಹರಿಷ್ಯತಿ ॥ ೫೧ ॥**

**॥ ವ್ಯಾಸ ಉವಾಚ ॥**

**ಇತ್ಯುಕ್ತ್ವಾ ಸರ್ಪರಾಜಾನಂ ಮುಮೋಚ ಭಗವಾನ್ಹರಿಃ ।**
**ಪ್ರಣಮ್ಯ ಸೋಽಪಿ ಕೃಷ್ಣಾಯ ಜಗಾಮ ಪಯಸಾಂನಿಧಿಂ ॥ ೫೨ ॥**

**ಪಶ್ಯತಾಂ ಸರ್ವಭೂತಾನಾಂ ಸಭೃತ್ಯಾಪತ್ಯಬಂಧವಃ ।**
**ಸಮಸ್ತಭಾರ್ಯಾಸಹಿತಃ ಪರಿತ್ಯಜ್ಯ ಸ್ವಕಂ ಹ್ರದಂ ॥ ೫೩ ॥**

---

ವಾಗಿ ಆಗಿದೆ. ನನ್ನ ಶಕ್ತಿಯಲ್ಲವೂ ಉಡುಗಿ ಹೋಯಿತು. ವಿಷವೆಲ್ಲವೂ ನಾಶವಾಯಿತು. ನನ್ನ ದೌಷ್ಟ್ಯವನ್ನು ಅಡಗಿಸಿರುವೆ. ಪ್ರಾಣದಾನವನ್ನು ಮಾಡು. ನಿನ್ನ ಆಜ್ಞೆಯಂತೆ ನಡೆಯುವೆನು. ಅನುಜ್ಞೆ ಮಾಡು. ಎಂದನು.

೫೦-೫೧. ಆಗ ಕೃಷ್ಣನಿಂತೆಂದನು:—ಸರ್ಪರಾಜನೇ, ನೀನು ಈ ಯಮುನಾಜಲವನ್ನು ಬಿಟ್ಟು ಬೇರೇಕಡೆಗೆ ಹೋಗು. ಎಂದಿಗೂ ಇಲ್ಲಿಗ ಬರ ಬೇಡ. ಭೃತ್ಯ ಪರಿವಾರ ಸಮೇತನಾಗಿ ಸಮುದ್ರದಲ್ಲಿ ಸೇರಿ ವಾಸಿಸು. ಗರುಡನಿಗೂ ಹೆದರಬೇಕಾದ ಅವಶ್ಯಕತೆಯಿಲ್ಲ. ನಿನ್ನ ತಲೆಯಮೇಲಿರುವ ನನ್ನ ಪಾದಗಳ ಗುರುತನ್ನು ನೋಡಿ ನಿನಗೆ ಶತ್ರುವಾದರೂ ಸಹ ಗರುಡನು ನಿನ್ನನ್ನೇನೂ ಮಾಡುವುದಿಲ್ಲ.

೫೨. ಎಂದು ಹೇಳಿದನಂತರ ಸರ್ಪರಾಜನನ್ನು ಬಿಟ್ಟನು. ಸರ್ಪ ರಾಜನೂ ಕೃಷ್ಣನಿಗೆ ವಂದಿಸಿ ಸಮುದ್ರಕ್ಕೆ ತೆರಳಿದನು.

೫೩. ತನ್ನ ಆಳು, ಮಕ್ಕಳು, ಭಾಂಧವರು, ಪತ್ನಿಯರು ಎಲ್ಲರನ್ನೂ ಜೊತೆಯಲ್ಲಿ ಕರೆದುಕೊಂಡು ನಾಗರಾಜನು ಪ್ರಾಣಿಗಳೆಲ್ಲರ ಎದುರಿಗೆ ಕಾಲಿಂದೀ ಮಡುವಿನಿಂದ ಹೊರಟು ಸಮುದ್ರವನ್ನು ಸೇರಿದನು.

ಗತೇ ಸರ್ಪೇ ಪರಿತ್ಯಜ್ಯ ಮೃತಂ ಪುನರಿವಾಗತಂ ।
ಗೋಪಾ ಮೂರ್ಧನಿ ಗೋವಿಂದಂ ಸಿಷಿಚುರ್ನೇತ್ರಜೈರ್ಜಲೈಃ ॥ ೫೪ ॥

ಕೃಷ್ಣಮಕ್ಲಿಷ್ಟಕರ್ಮಾಣಮನ್ಯೇ ವಿಸ್ಮಿತಚೇತಸಃ ।
ತುಷ್ಟುವುರ್ಮುದಿತಾ ಗೋಪಾ ದೃಷ್ಟ್ವಾ ಶಿವಜಲಾಂ ನದೀಂ ॥ ೫೫ ॥

ಗೀಯಮಾನೋಽಥ ಗೋಪೀಭಿಶ್ಚರಿತೈಶ್ಚಾರುಚೇಷ್ಟಿತೈಃ ।
ಸಂಸ್ತೂಯಮಾನೋ ಗೋಪಾಲೈಃ ಕೃಷ್ಣೋ ವ್ರಜಮುಪಾಗತಂ ॥ ೫೬ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇ ಕಾಲೀಯದಮನ
ನಿರೂಪಣಂ ನಾಮ ಪಂಚಾಶೀತ್ಯಧಿಕಶತತಮೋಽಧ್ಯಾಯಃ

---

೫೪–೫೫. ಸರ್ಪರಾಜನು ಸಮುದ್ರಕ್ಕೆ ಹೋಗಲು ಕೃಷ್ಣನು ಮೇಲಕ್ಕೆ ಬಂದನು. ಗೋಪಗೋಪಿಯರೆಲ್ಲರೂ ಮೃತನಾದ ಪುತ್ರನು ಬದುಕಿದಂತೆ ಬಂದಿರುವ ಕೃಷ್ಣನನ್ನು ನೋಡಿ ಹರ್ಷಾಶ್ರುಗಳಿಂದ ಅವನ ತಲೆಯನ್ನು ನೆನೆಸಿದರು. ಮತ್ತೆ ಕೆಲವರು ಇಂತಹ ಕಾರ್ಯಮಾಡಿದರೂ ಅವನಿಗೇನೂ ತೊಂದರೆಯಾಗದಿದ್ದನ್ನು ನೋಡಿ ವಿಸ್ಮಿತರಾಗಿ ಅವನನ್ನು ಕೊಂಡಾಡಿದರು. ಆ ನದಿಯ ನೀರು ವಿಷವಿಲ್ಲದೆ ಶುಭವಾದುದಕ್ಕೆ ಎಲ್ಲರೂ ಸಂತೋಷಪಟ್ಟರು.

೫೬. ಅನಂತರ ಗೋಪಿಯರೆಲ್ಲರೂ ವಿವಿಧವಾಗಿ ಆಟವಾಡುತ್ತಾ ಮಂಗಳ ಗೀತಗಳನ್ನು ಹಾಡಲು ಪ್ರಾರಂಭಿಸಿದರು. ಗೋಪಾಲರು ಕೃಷ್ಣನನ್ನು ಕೊಂಡಾಡಿದರು. ಎಲ್ಲರೊಡನೆಯೂ ಕೃಷ್ಣನು ಗೋಕುಲಕ್ಕೆ ತೆರಳಿದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣನ ಬಾಲಲೀಲೆಯ ವರ್ಣನೆಯಲ್ಲಿ
ಕಾಲೀಯದಮನನಿರೂಪಣವೆಂಬ ನೂರೆಂಭತ್ತೈದನೆಯ
ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಷಡಶೀತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಗಾಃ ಪಾಲಯಂತೌ ಚ ಪುನಃ ಸಹಿತೌ ರಾಮಕೇಶವೌ ।**
**ಭ್ರಮಮಾಣೌ ವನೇ ತತ್ರ ರಮ್ಯಂ ತಾಲವನಂ ಗತೌ ॥ ೧ ॥**

**ತಚ್ಚ ತಾಲವನಂ ನಿತ್ಯಂ ಧೇನುಕೋ ನಾಮ ದಾನವಃ ।**
**ನೃಗೋಮಾಂಸಕೃತಾಹಾರಃ ಸದಾಧ್ಯಾಸ್ತೇ ಖರಾಕೃತಿಃ ॥ ೨ ॥**

**ತತ್ರ ತಾಲವನಂ ರಮ್ಯಂ ಫಲಸಂಪತ್ಸಮನ್ವಿತಂ ।**
**ದೃಷ್ಟ್ವಾ ಸ್ಪೃಹಾನ್ವಿತಾ ಗೋಪಾಃ ಫಲಾದಾನೇಽಬ್ರುವನ್ವಚಃ ॥ ೩ ॥**

---

## ನೂರೆಂಭತ್ತಾರನೆಯ ಅಧ್ಯಾಯವು

೧. ವ್ಯಾಸನು ಹೇಳಿದನು :—ಬಲರಾಮಕೃಷ್ಣರು ಪ್ರತಿದಿನವೂ ಹಸುಗಳನ್ನು ಮೇಯಿಸುವುದಕ್ಕೆ ಹೋಗುತ್ತಿದ್ದರು. ಒಂದು ದಿನ ಹಸುಗಳನ್ನು ಮೇಯಿಸುತ್ತಾ-ಮೇಯಿಸುತ್ತಾ ತಾಳೇ ಮರಗಳಿಂದ ಮನೋಹರವಾದ ಒಂದು ಅರಣ್ಯಪ್ರದೇಶಕ್ಕೆ ಹೋದರು.

೨. ಆ ಸ್ಥಳಕ್ಕೆ ಧೇನುಕನೆಂಬ ರಾಕ್ಷಸನು ಕತ್ತೆಯವೇಷದಿಂದ ದಿನವೂ ಬರುತ್ತಿದ್ದನು. ಅಲ್ಲಿಗೆ ಬಂದು ಅಲ್ಲಿರುವ ಜನರನ್ನೂ ಹಸುಗಳನ್ನೂ ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದನು.

೩. ಆ ವನದಲ್ಲಿ ತಾಳೆಯ ಹಣ್ಣುಗಳು ಬಹುವಾಗಿ ಬಿಟ್ಟು ರಮ್ಯವಾಗಿ ಕಾಣಿಸುತ್ತಿತ್ತು. ಅದನ್ನು ನೋಡಿ ಗೋಪರೆಲ್ಲರೂ ಆನಂದಪಡುತ್ತಾ ಹಣ್ಣನ್ನು ಕಿತ್ತುಕೊಳ್ಳುವುದಕ್ಕೆ ಆಸೆಪಡುತ್ತಾ ಬಲರಾಮಕೃಷ್ಣರನ್ನು ಕುರಿತು,

॥ ಗೋಪಾ ಊಚುಃ ॥

ಹೇ ರಾಮ ಹೇ ಕೃಷ್ಣ ಸದಾ ಧೇನುಕೇನೈವ ರಕ್ಷ್ಯತೇ ।
ಭೂಪ್ರದೇಶೋ ಯತಸ್ತಸ್ಮಾತ್ತ್ಯಕ್ತಾನೀಮಾನಿ ಸಂತಿ ವೈ ॥ ೪ ॥

ಫಲಾನಿ ಪಶ್ಯ ತಾಲಾನಾಂ ಗಂಧಮೋದಯುತಾನಿ ವೈ ।
ವಯಮೇತಾನ್ಯಭೀಪ್ಸಾಮಃ ಪಾತ್ಯಂತಾಂ ಯದಿ ರೋಚತೇ ॥ ೫ ॥

ಇತಿ ಗೋಪಕುಮಾರಾಣಾಂ ಶ್ರುತ್ವಾ ಸಂಕರ್ಷಣೋ ವಚಃ ।
ಕೃಷ್ಣಶ್ಚ ಪಾತಯಾಮಾಸ ಭುವಿ ತಾಲಫಲಾನಿ ವೈ ॥ ೬ ॥

ತಾಲಾನಾಂ ಪತತಾಂ ಶಬ್ದಮಾಕರ್ಣ್ಯಾಸುರರಾಟ್ ತತಃ ।
ಆಜಗಾಮ ಸ ದುಷ್ಟಾತ್ಮಾ ಕೋಪಾದ್ದೈತೇಯಗರ್ದಭಃ ॥ ೭ ॥

ಪದ್ಭ್ಯಾಮುಭಾಭ್ಯಾಂ ಸ ತದಾ ಪಶ್ಚಿಮಾಭ್ಯಾಂ ಚ ತಂ ಬಲೀ ।
ಜಘಾನೋರಸಿ ತಾಭ್ಯಾಂ ಚ ಸ ಚ ತೇತಾಪ್ಯಗೃಹ್ಯತ ॥ ೮ ॥

ಗೃಹೀತ್ವಾ ಭ್ರಾಮಣೇನೈವ ಚಾಂಬರೇ ಗತಜೀವಿತಂ ।
ತಸ್ಮಿನ್ನೇವ ಪ್ರಚಿಕ್ಷೇಪ ವೇಗೇನ ತೃಣರಾಜನಿ ॥ ೯ ॥

---

೪-೫. ಎಲೈ ಬಲರಾಮ ಕೃಷ್ಣರೇ, ಈ ಪ್ರದೇಶವು ಧೇನುಕನೆಂಬ ರಾಕ್ಷಸನಿಗೆ ಸೇರಿದುದು. ಆದುದರಿಂದ ಈ ಹಣ್ಣುಗಳನ್ನು ನಾವಾರೂ ಕೀಳಲಾರೆವು. ಹಣ್ಣುಗಳ ವಾಸನೆಯಂತೂ ಘಮಘಮಿಸುತ್ತಿರುವುದು. ತಿನ್ನಬೇಕೆಂಬ ಆಸೆಯು ಮಿತಿಮೀರಿರುವುದು. ನಿನಗೆ ಸಾಧ್ಯವಾದಲ್ಲಿ ಹಣ್ಣುಗಳನ್ನು ಕೆಡವು ಎಂದರು.

೬. ತಕ್ಷಣ ಬಲರಾಮ ಕೃಷ್ಣರಿಬ್ಬರೂ ಮರಗಳಿಗೆ ಹತ್ತಿ ಹಣ್ಣುಗಳನ್ನು ಕೆಳಕ್ಕೆ ಕೆಡವಲು ಪ್ರಾರಂಭಿಸಿದರು.

೭-೮. ತಾಳೆಯ ಹಣ್ಣುಗಳು ಉದುರುತ್ತಿರುವ ಶಬ್ದವನ್ನು ಕೇಳಿ ಕತ್ತೆಯರೂಪವನ್ನು ತಾಳಿದ ಆ ಧೇನುಕನು ಓಡಿಬಂದನು. ಕೃಷ್ಣ ಬಲರಾಮರು ಹಣ್ಣುಗಳನ್ನು ಕೆಡವುತ್ತಿರುವುದನ್ನು ನೋಡಿ ಅತಿಕೋಪದಿಂದ ಅವರಿಬ್ಬರನ್ನೂ ಹಿಂಗಾಲುಗಳಿಂದ ಒದೆಯಲು ಪ್ರಾರಂಭಿಸಿದನು. ಆ ಏಟುಗಳು ಅವರ ಎದೆಗಳಿಗೆ ಬೀಳುತ್ತಿರಲು ಅವರಿಬ್ಬರೂ ಧೇನುಕನ ಕಾಲುಗಳನ್ನು ಬಿಗಿಯಾಗಿ ಹಿಡಿದು

೯. ಸುತ್ತಲೂ ತಿರುಗಿಸುತ್ತಾ ಬಹಳ ವೇಗವಾಗಿ ಹುಲ್ಲನ್ನು ಎಸೆಯುವಂತೆ ಮೇಲಕ್ಕೆ ಎಸೆದುಬಿಟ್ಟರು. ಅವನ ಪ್ರಾಣವು ಹೊರಟುಹೋಯಿತು.

ತತಃ ಫಲಾನ್ಯನೇಕಾನಿ ತಾಲಾಗ್ರಾನ್ನಿಪತನ್ಪರಃ ।
ಪೃಥಿವ್ಯಾಂ ಪಾತಯಾಮಾಸ ಮಹಾವಾತೋಽಂಬುದಾನಿವ ॥ ೧೦ ॥

ಅನ್ಯಾನಪ್ಯಸ್ಯ ವೈ ಜ್ಞಾತೀನಾಗತಾನ್ದೈತ್ಯಗರ್ದಭಾನ್ ।
ಕೃಷ್ಣಶ್ಚಿಕ್ಷೇಪ ತಾಲಾಗ್ರೇ ಬಲಭದ್ರಶ್ಚ ಲೀಲಯಾ ॥ ೧೧ ॥

ಕ್ಷಣೇನಾಲಂಕೃತಾ ಪೃಥ್ವೀ ಪಕ್ವೈಸ್ತಾಲಫಲೈಸ್ತದಾ ।
ದೈತ್ಯಗರ್ದಭದೇಹೈಶ್ಚ ಮುನಯಃ ಶುಶುಭೇಽಧಿಕಂ ॥ ೧೨ ॥

ತತೋ ಗಾವೋ ನಿರಾಬಾಧಾಸ್ತಸ್ಮಿಂಸ್ತಾಲವನೇ ದ್ವಿಜಾಃ ।
ನವಶಷ್ಪಂ ಸುಖಂ ಚೇರುರ್ಯತ್ರ ಭುಕ್ತಮಭೂತ್ಪುರಾ ॥ ೧೩ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇ ಧೇನುಕವಧ-ವರ್ಣನಂ ನಾಮ ಷಡಶೀತ್ಯಧಿಕಶತತಮೋಽಧ್ಯಾಯಃ

---

೧೦. ಅವನನ್ನು ಎಸೆಯಲು ಧೇನುಕನು ತಾಳೇಮರಗಳಮೇಲೆ ಬಿದ್ದನು. ಆಗ ದೊಡ್ಡಗಾಳಿಯು ಮೋಡಗಳನ್ನು ಛಿನ್ನಭಿನ್ನವಾಗಿ ಮಾಡುವಂತೆ ಅನೇಕ ತಾಳೆಯಹಣ್ಣುಗಳು ಕೆಳಕ್ಕೆ ಉದುರಿ ಇಟ್ಟಾಡಿದವು.

೧೧. ಅನಂತರ ಧೇನುಕನ ಆನೇಕ ಬಂಧುಗಳು ಎದುರಿಸಲು ಬಂದರು. ಅವರನ್ನೂ ಸಹ ಕೃಷ್ಣ ಬಲರಾಮರು ತಾಳೇಮರಗಳ ಮೇಲಕ್ಕೆ ಅನಾಯಾಸವಾಗಿ ಎಸೆದು ಬಿಟ್ಟರು.

೧೨. ಸ್ವಲ್ಪ ಸಮಯದೊಳಗಾಗಿ ಭೂಮಿಯಲ್ಲವೂ ತಾಳೇಹಣ್ಣುಗಳಿಂದ ಕೂಡಿ ಅಲಂಕೃತವಾದಂತಾಯಿತು. ಧೇನುಕನ ಮತ್ತು ಅವನನುಯಾಯಿಗಳ ಮೃತಶರೀರಗಳೆಲ್ಲವೂ ಒಂದು ಕಡೆ ಬಿದ್ದಿದ್ದವು. ಇದನ್ನು ನೋಡಿ ಮುನಿಗಳೆಲ್ಲರೂ ಬಲರಾಮ ಕೃಷ್ಣರನ್ನು ಕೊಂಡಾಡಿದರು.

೧೩. ಅನಂತರ ಹಸುಗಳೆಲ್ಲವೂ ಯಾವ ತೊಂದರೆಯೂ ಇಲ್ಲದಂತೆ ಆ ತಾಳವನದಲ್ಲಿ ಸುಖವಾಗಿ ಎಳೆಯ ಗರಿಕೆಗಳನ್ನು ಮೆಯ್ದವು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣಚರಿತ್ರೆಯಲ್ಲಿ ಧೇನುಕವಧವರ್ಣನವೆಂಬ ನೂರೆಂಭತ್ತಾರನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅ ಥ ಬ್ರಾ ಹ್ಮೇ ಮ ಹಾ ಪು ರಾ ಣೇ

## ಸಪ್ತಾಶೀತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ತಸ್ಮಿನ್ರಾಸಭದೈತೇಯೇ ಸಾನುಜೇ ವಿನಿಪಾತಿತೇ ।**
**ಸರ್ವಗೋಪಾಲಗೋಪೀನಾಂ ರಮ್ಯಂ ತಾಲವನಂ ಬಭೌ ॥ ೧ ॥**

**ತತಸ್ತೌ ಜಾತಹರ್ಷೌ ತು ವಸುದೇವಸುತಾವುಭೌ ।**
**ಶುಶುಭಾತೇ ಮಹಾತ್ಮಾನೌ ಬಾಲಶೃಂಗಾವಿವರ್ಷಭೌ ॥ ೨ ॥**

**ಚಾರಯಂತೌ ಚ ಗಾ ದೂರೇ ವ್ಯಾಹರಂತೌ ಚ ನಾಮಭಿಃ ।**
**ನಿಯೋಗಪಾಶಸ್ಕಂಧೌ ತೌ ವನಮಾಲಾವಿಭೂಷಿತೌ ॥ ೩ ॥**

---

## ನೂರೆಂಭತ್ತೇಳನೆಯ ಅಧ್ಯಾಯವು

೧. ವ್ಯಾಸನಿಂತೆಂದನು :—ರಾಸಭರೂಪಧಾರಿಯಾದ ಧೇನುಕನು ತನ್ನ ಅನುಯಾಯಿಗಳೊಡನೆ ಸಾಯಲು ಗೋಪಗೋಪಿಯರೆಲ್ಲರೂ ನಿರ್ಭಯರಾಗಿ ಆ ತಾಲವನಕ್ಕೆ ಬರುತ್ತಿದ್ದರು. ಅದರಿಂದ ಆ ವನವು ಬಲುಮನೋಹರ ವಾಗಿರುತ್ತಿತ್ತು.

೨-೩. ಬಲರಾಮ ಕೃಷ್ಣರೂ ಸಹ ಋಷಭಗಳಂತೆ ಸ್ವಚ್ಛಂದವಾಗಿ ಸಂಚರಿಸುತ್ತಿದ್ದರು. ಬಾಲಕರಿಗೆಲ್ಲಾ ಮುಂದಾಳಾಗಿ ದೂರಪ್ರದೇಶಗಳಲ್ಲಿ ಹಸುಗಳನ್ನು ಮೇಯಿಸುತ್ತಾ, ಹಸುಗಳನ್ನು ಹೆಸರು ಹಿಡಿದು ಕೂಗುತ್ತಾ ಆನಂದ ದಿಂದ ಓಡಾಡಿದರು. ಹಸುಗಳನ್ನು ಕಟ್ಟುವ ಹಗ್ಗವನ್ನು ಕೊರಳಿಗೆ ಸುತ್ತಿ ಕೊಂಡು ತುಳಸಿಯ ಮಾಲಿಕೆಯನ್ನು ಮಾಡಿ ಹಾಕಿಕೊಂಡು ಆ ವನದಲ್ಲಿ ಸಂಚರಿಸುತ್ತಿದ್ದರು.

ಸುವರ್ಣಾಂಜನಚೂರ್ಣಾಭ್ಯಾಂ ತದಾ ತೌ ಭೂಷಿತಾಂಬರೌ ।
ಮಹೇಂದ್ರಾಯುಧಸಂಕಾಶೌ ಶ್ವೇತಕೃಷ್ಣಾವಿವಾಂಬುದೌ ॥ ೪ ॥

ಚೇರತುರ್ಲೋಕಸಿದ್ಧಾಭಿಃ ಕ್ರೀಡಾಭಿರಿತರೇತರಂ ।
ಸಮಸ್ತಲೋಕನಾಥಾನಾಂ ನಾಥಭೂತೌ ಭುವಂ ಗತೌ ॥ ೫ ॥

ಮನುಷ್ಯಧರ್ಮಾಭಿರತೌ ಮಾನಯಂತೌ ಮನುಷ್ಯತಾಂ ।
ತಜ್ಜಾತಿಗುಣಯುಕ್ತಾಭಿಃ ಕ್ರೀಡಾಭಿಶ್ಚೇರತುರ್ವನಂ ॥ ೬ ॥

ತತಸ್ತ್ವಾಂದೋಲಿಕಾಭಿಶ್ಚ ನಿಯುದ್ಧೈಶ್ಚ ಮಹಾಬಲೌ ।
ವ್ಯಾಯಾಮಂ ಚಕ್ರತುಸ್ತತ್ರ ಕ್ಷೇಪಣೀಯೈಸ್ತಥಾಶ್ಮಭಿಃ ॥ ೭ ॥

ತಲ್ಲಿಪ್ಸುರಸುರಸ್ತತ್ರ ಉಭಯೋಃ ರಮಮಾಣಯೋಃ ।
ಆಜಗಾಮ ಪ್ರಲಂಬಾಖ್ಯೋ ಗೋಪವೇಷತಿರೋಹಿತಃ ॥ ೮ ॥

---

೪. ಕೃಷ್ಣನು ಪೀತಾಂಬರವನ್ನೂ ಬಲರಾಮನು ನೀಲಾಂಬರವನ್ನೂ ಉಟ್ಟು ಇಂದ್ರಾಯುಧದಂತೆ ಪ್ರಕಾಶಿಸುತ್ತಿದ್ದರು. ಕೃಷ್ಣನು ನೀಲವಾಗಿಯೂ, ಬಲರಾಮನು ಬಿಳುಪಾಗಿಯೂ ಇದ್ದುದರಿಂದ ಕಪ್ಪುಬಿಳುಪು ಮೋಡಗಳು ಒಟ್ಟಿಗೆ ಸೇರಿದಂತೆ ಕಾಣುತ್ತಿದ್ದರು.

೫-೬. ಸಮಸ್ತಲೋಕಗಳಿಗೂ ರಕ್ಷಕರಾಗಿದ್ದರೂ ಸಹ ಭೂಮಿಯಲ್ಲಿ ಮನುಜರಾಗಿ ಹುಟ್ಟಿ ಮನುಷ್ಯರಂತೆ ವರ್ತಿಸುತ್ತಾ ಗೋಪಜಾತಿಗೆ ತಕ್ಕಂತೆ ಲೋಕದಲ್ಲಿ ಪ್ರಸಿದ್ಧವಾದ ಆಟಗಳನ್ನಾಡುತ್ತಾ ಆ ವನದಲ್ಲಿ ಸಂಚರಿಸಿದರು.

೭. ಮಹಾಬಲಶಾಲಿಗಳಾದ ಅವರು ಕುಸ್ತಿಮಾಡುತ್ತಿದ್ದರು. ಎಲ್ಲರೊಡನೆ ಸೇರಿ ವ್ಯಾಯಾಮವನ್ನು ಮಾಡುತ್ತಾ ಪರಸ್ಪರ ಕಲ್ಲುಗಳನ್ನೆಸೆದಾಡುತ್ತಾ ಚೇಷ್ಟೆಮಾಡುತ್ತಿದ್ದರು.

೮-೯. ಈರೀತಿ ಇಬ್ಬರೂ ಗೋಪಾಲಕರೊಡನೆ ಆಟವಾಡುತ್ತಿರಲು

ಸೋಽವಗಾಹತ ನಿಃಶಂಕಂ ತೇಷಾಂ ಮಧ್ಯಮಮಾನುಷಃ ।
ಮಾನುಷಂ ರೂಪಮಾಸ್ಥಾಯ ಪ್ರಲಂಬೋ ದಾನವೋತ್ತಮಃ ॥ ೯ ॥

ತಯೋಶ್ಛಿದ್ರಾಂತರಪ್ರೇಪ್ಸುರತಿಶೀಘ್ರಮಮನ್ಯತ ।
ಕೃಷ್ಣಂ ತತೋ ರೌಹಿಣೇಯಂ ಹಂತುಂ ಚಕ್ರೇ ಮನೋರಥಂ ॥ ೧೦ ॥

ಹರಿಣಾ ಕ್ರೀಡನಂ ನಾಮ ಬಾಲಕ್ರೀಡನಕಂ ತತಃ ।
ಪ್ರಕ್ರೀಡಿತಾಸ್ತು ತೇ ಸರ್ವೇ ದ್ವೌ ದ್ವೌ ಯುಗಪದುತ್ಪತನ್ ॥ ೧೧ ॥

ಶ್ರೀದಾಮ್ನಾ ಸಹ ಗೋವಿಂದಃ ಪ್ರಲಂಬೇನ ತಥಾ ಬಲಃ ।
ಗೋಪಾಲೈರಪರೈಶ್ಚಾನ್ಯೇ ಗೋಪಾಲಾಃ ಸಹ ಪುಪ್ಲುವುಃ ॥ ೧೨ ॥

ಶ್ರೀದಾಮಾನಂ ತತಃ ಕೃಷ್ಣಃ ಪ್ರಲಂಬಂ ರೋಹಿಣೀಸುತಃ ।
ಜಿತವಾನ್ಕೃಷ್ಣಪಕ್ಷೀಯೈರ್ಗೋಪೈರನ್ಯೇ ಪರಾಜಿತಾಃ ॥ ೧೩ ॥

---

ಪ್ರಲಂಬನೆಂಬ ರಾಕ್ಷಸನು ಗೊಲ್ಲನವೇಷವನ್ನು ಧರಿಸಿ ಅವರಿಬ್ಬರನ್ನೂ ನಾಶ ಮಾಡಲು ಧೈರ್ಯವಾಗಿ ಅವರ ಮಧ್ಯದಲ್ಲಿ ಬಂದು ಸೇರಿದನು.

೧೦ ಅವರಿಬ್ಬರನ್ನೂ ಏನಾದರೂ ಮಾಡಿ ಬೇರ್ಪಡಿಸಿ ಕೊಂದುಹಾಕಬೇಕೆಂದು ಮನಸ್ಸುಮಾಡಿದನು.

೧೧. ಹುಡುಗರೆಲ್ಲರೂ 'ಜಿಂಕೆಯ ಆಟ' ವೆಂಬ ಆಟವನ್ನು ಆಡುತ್ತಿದ್ದರು. ಅದರಲ್ಲಿ ಇಬ್ಬಿಬ್ಬರು ಸೇರಿ ಕುಪ್ಪಳಿಸುತ್ತಾ ಓಡಾಡುವುದು, ಈರೀತಿ ಎಲ್ಲರೂ ಆಡುತ್ತಿದ್ದರು.

೧೨. ಶ್ರೀದಾಮನೆಂಬುವನೊಡನೆ ಕೃಷ್ಣನೂ, ಪ್ರಲಂಬನೊಡನೆ ಬಲರಾಮನೂ ಇತರೆಯವರೂ ಒಬ್ಬೊಬ್ಬರೊಡನೆ ಸೇರಿ ಆಡಿದರು.

೧೩. ಕೃಷ್ಣನು ಶ್ರೀದಾಮನನ್ನೂ ಬಲರಾಮನು ಪ್ರಲಂಬನನ್ನೂ ಸೋಲಿಸಿದರು. ಕೃಷ್ಣನ ಕಡೆಗೆ ಸೇರಿದ್ದ ಗೋಪರೆಲ್ಲರೂ ತಮ್ಮ ವಿರುದ್ಧಪಕ್ಷದವರನ್ನು ಸೋಲಿಸಿದರು.

ತೇ ವಾಹಯಂತಸ್ತ್ವನ್ಯೋನ್ಯಂ ಭಾಂಡೀರಸ್ಕಂಧಮೇತ್ಯ ವೈ ।
ಪುನರ್ನಿವೃತ್ತಾಸ್ತೇ ಸರ್ವೇ ಯೇ ಯೇ ತತ್ರ ಪರಾಜಿತಾಃ ॥ ೧೪ ॥

ಸಂಕರ್ಷಣಂ ತು ಸ್ಕಂಧೇನ ಶೀಘ್ರಮುತ್ಕ್ಷಿಪ್ಯ ದಾನವಃ ।
ನ ತಸ್ಥೌ ಪ್ರಜಗಾಮೈವ ಸಚಂದ್ರ ಇವ ವಾರಿದಃ ॥ ೧೫ ॥

ಅಶಕ್ತೋ ವಹನೇ ತಸ್ಯ ಸಂರಂಭಾದ್ದಾನವೋತ್ತಮಃ ।
ವವೃಧೇ ಸುಮಹಾಕಾಯಃ ಪ್ರಾವೃಷೀವ ಬಲಾಹಕಃ ॥ ೧೬ ॥

ಸಂಕರ್ಷಣಸ್ತು ತಂ ದೃಷ್ಟ್ವಾ ದಗ್ಧಶೈಲೋಪಮಾಕೃತಿಂ ।
ಸ್ರಗ್ದಾಮಲಂಬಾಭರಣಂ ಮುಕುಟಾಟೋಪಮಸ್ತಕಂ ॥ ೧೭ ॥

ರೌದ್ರಂ ಶಕಟಚಕ್ರಾಕ್ಷಂ ಪಾದನ್ಯಾಸಚಲತ್ಕ್ಷಿತಿಂ ।
ಹ್ರಿಯಮಾಣಸ್ತತಃ ಕೃಷ್ಣಮಿದಂ ವಚನಮಬ್ರವೀತ್ ॥ ೧೮ ॥

---

೧೪. ಸೋತವರೆಲ್ಲರೂ ಗೆದ್ದವರನ್ನು ಗಡಿಗೆಯನ್ನು ಹೊರುವಂತೆ ಹೆಗಲಮೇಲೆ ಕೂರಿಸಿಕೊಂಡು ಸೋತಸ್ಥಳದಿಂದ ಆಟವಾಡುವ ಸ್ಥಳಕ್ಕೆ ಬರಬೇಕಾಗಿತ್ತು. ಸೋತವರೆಲ್ಲರೂ ಆರೀತಿ ಮಾಡಿದರು. ಈಗ ಪ್ರಲಂಬನ ಸರದಿ ಬಂದಿತು.

೧೫. ಕೃಷ್ಣವರ್ಣನಾದ ಆ ರಾಕ್ಷಸನು ಬಲರಾಮನನ್ನು, ಮೋಡವು ಚಂದ್ರನನ್ನು ಧರಿಸುವಂತೆ ಹೆಗಲಮೇಲೆ ಹೊತ್ತು ಅಲ್ಲಿ ನಿಲ್ಲದೆ ಜಾಗ್ರತೆಯಾಗಿ ಹೊರಟನು.

೧೬. ಆದರೆ ಪ್ರಲಂಬನಿಗೆ ಬಲರಾಮನನ್ನು ಹೊರಲು ಸಾಧ್ಯವಾಗಲಿಲ್ಲ. ಆಗ ಅವನು ಮಳೆಗಾಲದಲ್ಲಿ ಮೋಡಗಳು ಬೆಳೆಯುವಂತೆ ದೊಡ್ಡದಾಗಿ ಬೆಳೆದನು.

೧೭-೧೮. ಆ ದೈತ್ಯನು ದೊಡ್ಡ ಪರ್ವತಂತೆ ಭಯಂಕರನಾಗಿ ಕಾಣಿಸುತ್ತಿದ್ದನು. ಅವನ ಕತ್ತಿನಲ್ಲಿರುವ ಮುತ್ತಿನ ಹಾರಗಳು ಅಲುಗಾಡುತ್ತಿದ್ದವು. ತಲೆಯ ಮೇಲಿನ ಕಿರೀಟವು ಚಲಿಸಿತು. ಅವನ ಪಾದ ವಿನ್ಯಾಸದಿಂದ ಭೂಮಿಯು ನಡುಗಿತು. ಅವನ ಕಣ್ಣುಗಳು ಬಂಡಿಯಚಕ್ರದಂತೆ ವಿಶಾಲವಾದವು. ಇಂತಹ ಭಯಂಕರ ರೂಪವನ್ನು ಧರಿಸಿ ಬಲರಾಮನನ್ನು ಅಪಹರಿಸಲು ಪ್ರಯತ್ನಿಸಿದಾಗ ಬಲರಾಮನು ಕೃಷ್ಣನನ್ನು ಕುರಿತು,

॥ ಬಲರಾಮ ಉವಾಚ ॥
ಕೃಷ್ಣ ಕೃಷ್ಣ ಹ್ರಿಯೇ ತ್ವೇಷ ಪರ್ವತೋದಗ್ರಮೂರ್ತಿನಾ ।
ಕೇನಾಪಿ ಪಶ್ಯ ದೈತ್ಯೇನ ಗೋಪಾಲಚ್ಛದ್ಮರೂಪಿಣಾ ॥ ೧೯ ॥

ಯದತ್ರ ಸಾಂಪ್ರತಂ ಕಾರ್ಯಂ ಮಯಾ ಮಧುನಿಷೂದನ ।
ತತ್ಕಥ್ಯತಾಂ ಪ್ರಯಾತ್ಯೇಷ ದುರಾತ್ಮಾತಿತ್ವರಾನ್ವಿತಃ ॥ ೨೦ ॥

॥ ವ್ಯಾಸ ಉವಾಚ ॥
ತಮಾಹ ರಾಮಂ ಗೋವಿಂದಃ ಸ್ಮಿತಭಿನ್ನೋಷ್ಠಸಂಪುಟಃ ।
ಮಹಾತ್ಮಾ ರೌಹಿಣೇಯಸ್ಯ ಬಲವೀರ್ಯಪ್ರಮಾಣವಿತ್ ॥ ೨೧ ॥

॥ ಕೃಷ್ಣ ಉವಾಚ ॥
ಕಿಮಯಂ ಮಾನುಷೋ ಭಾವೋ ವ್ಯಕ್ತಮೇವಾವಲಂಬ್ಯತೇ ।
ಸರ್ವಾತ್ಮನ್ಸರ್ವಗುಹ್ಯಾನಾಂ ಗುಹ್ಯಾದ್ಗುಹ್ಯಾತ್ಮನಾ ತ್ವಯಾ ॥ ೨೨ ॥

ಸ್ಮರಾಶೇಷಜಗದೀಶ ಕಾರಣಂ ಕಾರಣಾಗ್ರಜ ।
ಆತ್ಮಾನಮೇಕಂ ತದ್ವಚ್ಚ ಜಗತ್ಯೇಕಾರ್ಣವೇ ಚ ಯಃ ॥ ೨೩ ॥

---

೧೯-೨೦. ಎಲೈ ಕೃಷ್ಣ, ಗೊಲ್ಲನ ವೇಷವನ್ನು ಧರಿಸಿದ ಯಾವನೋ ರಾಕ್ಷಸನು ನನ್ನನ್ನಪಹರಿಸುತ್ತಿರುವನು. ನೋಡಿಲ್ಲಿ. ಪರ್ವತದಂತೆ ದೊಡ್ಡದಾದ ರೂಪವನ್ನು ಧರಿಸಿ ನನ್ನನ್ನೆತ್ತಿಕೊಂಡು ಜಾಗ್ರತೆಯಾಗಿ ಹೊರಟುಹೋಗುತ್ತಿರುವನು. 'ಈಗ ಇದಕ್ಕೆ ನಾನೇನು ಮಾಡಲಿ' ಬೇಗ ಹೇಳು ಎಂದನು.

೨೧. ಆಗ ಶ್ರೀಕೃಷ್ಣನು ಮುಗುಳ್ನಗೆ ನಗುತ್ತಾ ಬಲರಾಮನ ಶೌರ್ಯ ಧೈರ್ಯಾದಿಗಳನ್ನು ತಿಳಿದವನಾಗಿ ಅವನನ್ನು ಕುರಿತು

೨೨. ಅಣ್ಣಾ, ಇದೇನಿದು? ಏನೂ ತಿಳಿಯುವದವನಂತೆ ಆಚರಿಸುತ್ತಿರುವೆ. ಗೂಢವಾದ ವಿಷಯಗಳಿಗೆಲ್ಲಾ ಆತ್ಮಸ್ವರೂಪನು ನೀನು. ರಹಸ್ಯಗಳಿಗೆಲ್ಲಾ ರಹಸ್ಯನು.

೨೩. ನೀನು ಜಗತ್ಕಾರಣನಲ್ಲವೇ? ಜಗತ್ಪ್ರಭುವಲ್ಲವೇ? ಜಲಮಯವಾದ ಪ್ರಪಂಚದಲ್ಲಿ ನೀನೂ ಒಬ್ಬ ಕಾರಣಪುರುಷನಲ್ಲವೇ?

ಭವಾನಹಂ ಚ ವಿಶ್ವಾತ್ಮನ್ನೇಕಮೇವ ಹಿ ಕಾರಣಂ ।
ಜಗತೋಽಸ್ಯ ಜಗತ್ಯರ್ಥೇ ಭೇದೇನಾವಾಂ ವ್ಯವಸ್ಥಿತೌ ॥ ೨೪ ॥

ತತ್ಸ್ಮರ್ಯತಾಮಮೇಯಾತ್ಮಂಸ್ತ್ವಯಾತ್ಮಾ ಜಹಿ ದಾನವಂ ।
ಮಾನುಷ್ಯಮೇವಮಾಲಂಬ್ಯ ಬಂಧೂನಾಂ ಕ್ರಿಯತಾಂ ಹಿತಂ ॥ ೨೫ ॥

॥ ವ್ಯಾಸ ಉವಾಚ ॥

ಇತಿ ಸಂಸ್ಮಾರಿತೋ ವಿಪ್ರಾಃ ಕೃಷ್ಣೇನ ಸುಮಹಾತ್ಮನಾ ।
ವಿಹಸ್ಯ ಪೀಡಯಾಮಾಸ ಪ್ರಲಂಬಂ ಬಲವಾನ್ಬಲಃ ॥ ೨೬ ॥

ಮುಷ್ಟಿನಾ ಚಾಹನನ್ಮೂರ್ಧ್ನಿ ಕೋಪಸಂರಕ್ತಲೋಚನಃ ।
ತೇನ ಚಾಸ್ಯ ಪ್ರಹಾರೇಣ ಬಹಿರ್ಯಾತೇ ವಿಲೋಚನೇ ॥ ೨೭ ॥

ಸ ನಿಷ್ಕಾಸಿತಮಸ್ತಿಷ್ಕೋ ಮುಖಾಚ್ಛೋಣಿತಮುದ್ವಮನ್ ।
ನಿಪಪಾತ ಮಹೀಪೃಷ್ಠೇ ದೈತ್ಯವರ್ಯೋ ಮಮಾರ ಚ ॥ ೨೮ ॥

---

೨೪-೨೫. ನಾನೂ ನೀನೂ ಇಬ್ಬರೂ ಒಂದೇ ಅಲ್ಲವೇ? ಆ ಅಭೇದವೇ ಪ್ರಪಂಚಕ್ಕೆ ಕಾರಣವು. ಆದರೆ ಜಗತ್ತಿನಲ್ಲಿ ಉತ್ಪತ್ತಿಯನ್ನು ಹೊಂದಿ ಇತರರಿಗೆ ಬೇರೆಬೇರೆಯಾಗಿ ಕಾಣಿಸಿಕೊಳ್ಳುತ್ತಿರುವೆವು. ಆದುದರಿಂದ ಇವೆಲ್ಲವನ್ನೂ ಸ್ಮರಿಸಿಕೊಂಡು ಮನುಷ್ಯರಂತೆ ಆಚರಿಸಿ ಆ ದಾನವನನ್ನು ಸಂಹಾರಮಾಡು. ಹೆದರಿರುವ ಬಂಧುಗಳಿಗೆಲ್ಲಾ ಹಿತವನ್ನುಂಟುಮಾಡು. ಎಂದನು.

೨೬. ಕೃಷ್ಣನ ಮಾತನ್ನು ಕೇಳಿ ಬಲರಾಮನಿಗೆ ತನ್ನ ಸ್ವರೂಪವೆಲ್ಲವೂ ಜ್ಞಾಪಕಕ್ಕೆ ಬಂದಿತು. ಆಗ ವಿಕಟವಾಗಿ ನಗುತ್ತಾ ಪ್ರಲಂಬನನ್ನು ಹಿಂಸಿಸಲು ಪ್ರಾರಂಭಿಸಿದನು.

೨೭-೨೮. ಮುಷ್ಟಿಯಿಂದ ತಲೆಯನ್ನು ಬಲವಾಗಿ ಕುಟ್ಟಿದನು. ಆ ಏಟಿನಿಂದ ಕಣ್ಣುಗಳು ಈಚೆಗೆ ಬಂದವು. ಬುರುಡೆಯೊಡೆದು ಮೆದುಳು ಹೊರಕ್ಕೆ ಬಂದಿತು. ಬಾಯಿಂದ ರಕ್ತವು ಸುರಿಯಲು ಪ್ರಾರಂಭಿಸಿತು. ಪ್ರಲಂಬನು ಕೆಳಕ್ಕೆ ಉರುಳಿ ಪ್ರಾಣಬಿಟ್ಟನು.

ಪ್ರಲಂಬಂ ನಿಹತಂ ದೃಷ್ಟ್ವಾ ಬಲೇನಾದ್ಭುತಕರ್ಮಣಾ ।
ಪ್ರಹೃಷ್ಟಾಸ್ತುಷ್ಟುವುರ್ಗೋಪಾಃ ಸಾಧು ಸಾಧ್ವಿತಿ ಚಾಬ್ರುವನ್ ॥ ೨೯ ॥

ಸಂಸ್ತೂಯಮಾನೋ ರಾಮಸ್ತು ಗೋಪೈರ್ದೈತ್ಯೇ ನಿಪಾತಿತೇ ।
ಪ್ರಲಂಬೇ ಸಹ ಕೃಷ್ಣೇನ ಪುನರ್ಗೋಕುಲಮಾಯಯೌ ॥ ೩೦ ॥

॥ ವ್ಯಾಸ ಉವಾಚ ॥

ತಯೋರ್ವಿಹರತೋರೇವಂ ರಾಮಕೇಶವಯೋರ್ವ್ರಜೇ ।
ಪ್ರಾವೃಡ್ವ್ಯತೀತಾ ವಿಕಸತ್ಸರೋಜಾ ಚಾಭವಚ್ಛರತ್ ॥ ೩೧ ॥

ವಿಮಲಾಂಬರನಕ್ಷತ್ರೇ ಕಾಲೇ ಚಾಭ್ಯಾಗತೇ ವ್ರಜಂ ।
ದದರ್ಶೇಂದ್ರೋತ್ಸವಾರಂಭಪ್ರವೃತ್ತಾನ್ವ್ರಜವಾಸಿನಃ ॥ ೩೨ ॥

ಕೃಷ್ಣಸ್ತಾನುತ್ಸುಕಾನ್ದೃಷ್ಟ್ವಾ ಗೋಪಾನುತ್ಸವಲಾಲಸಾನ್ ।
ಕೌತೂಹಲಾದಿದಂ ವಾಕ್ಯಂ ಪ್ರಾಹ ವೃದ್ಧಾನ್ಮಹಾಮತಿಃ ॥ ೩೩ ॥

---

೨೯-೩೦. ಬಹಳ ಪರಾಕ್ರಮದಿಂದ ಬಲರಾಮನು ಪ್ರಲಂಬನನ್ನು ಕೊಂದುಹಾಕಲು ಗೋಪರೆಲ್ಲರೂ 'ಭಲಾ, ಭಲಾ' ಎಂದು ಹೇಳುತ್ತಾ ಬಲರಾಮನನ್ನು ಹೊಗಳಿದರು. ಕೃಷ್ಣನೊಡನೆ ಎಲ್ಲರೂ ಗೋಕುಲಕ್ಕೆ ತೆರಳಿದರು.

೩೧-೩೨. ಅಲ್ಲಿ ತಮ್ಮ ಬಾಲಲೀಲೆಗಳನ್ನು ತೋರಿಸುತ್ತಾ ಆನಂದವಾಗಿರುತ್ತಿರಲು ವರ್ಷಾಕಾಲವು ಕಳೆದುಹೋಯಿತು. ಶರತ್ಕಾಲವು ಪ್ರಾಪ್ತವಾಯಿತು. ಕಮಲಗಳೆಲ್ಲವೂ ಬಿರಿದು ಸುಂದರವಾದವು. ಆಕಾಶವೆಲ್ಲವೂ ನಿರ್ಮಲವಾಯಿತು. ನಕ್ಷತ್ರಗಳೆಲ್ಲವೂ ಕಾಣಿಸಿಕೊಂಡವು. ಇಂತಹ ಮನೋಹರವಾದ ಸಮಯದಲ್ಲಿ ಪ್ರತಿವರ್ಷದಂತೆ ಈ ವರ್ಷದಲ್ಲಿಯೂ ಇಂದ್ರೋತ್ಸವವನ್ನು ಮಾಡಲು ಗೋಪಗೋಪಿಯರೆಲ್ಲರೂ ಉತ್ಸಾಹಭರಿತರಾದರು.

೩೩. ಅವರೆಲ್ಲರ ಸಡಗರವನ್ನು ನೋಡಿ ಕೃಷ್ಣನಿಗೆ ಆಶ್ಚರ್ಯವಾಯಿತು. ಆಗ ಅವರ ಗುಂಪಿಗೆ ಹಿರಿಯರಾದ ಕೆಲವು ವೃದ್ಧರನ್ನು ಕುರಿತು–

॥ ಕೃಷ್ಣ ಉವಾಚ ॥

ಕೋಽಯಂ ಶಕ್ರಮಹೋ ನಾಮ ಯೇನ ವೋ ಹರ್ಷ ಆಗತಃ ।
ಪ್ರಾಹ ತಂ ನಂದಗೋಪಶ್ಚ ಪೃಚ್ಛಂತಮತಿಸಾದರಂ ॥ ೩೪ ॥

॥ ನಂದ ಉವಾಚ ॥

ಮೇಘಾನಾಂ ಪಯಸಾಮೀಶೋ ದೇವರಾಜಃ ಶತಕ್ರತುಃ ।
ಯೇನ ಸಂಚೋದಿತಾ ಮೇಘಾ ವರ್ಷಂತ್ಯಂಬುಮಯಂ ರಸಂ ॥ ೩೫ ॥

ತದ್ವೃಷ್ಟಿಜನಿತಂ ಸಸ್ಯಂ ವಯಮನ್ಯೇ ಚ ದೇಹಿನಃ ।
ವರ್ತಯಾಮೋಪಭುಂಜಾನಾಸ್ತರ್ಪಯಾಮಶ್ಚ ದೇವತಾಃ ॥ ೩೬ ॥

ಕ್ಷೀರವತ್ಯ ಇಮಾ ಗಾವೋ ವತ್ಸವತ್ಯಶ್ಚ ನಿರ್ವೃತಾಃ ।
ತೇನ ಸಂವರ್ಧಿತೈಃ ಸಸ್ಯೈಃ ಪುಷ್ಟಾಸ್ತುಷ್ಟಾ ಭವಂತಿ ವೈ ॥ ೩೭ ॥

ನಾಸಸ್ಯಾ ನಾತೃಣಾ ಭೂಮಿರ್ನ ಬುಭುಕ್ಷಾರ್ದಿತೋ ಜನಃ ।
ದೃಶ್ಯತೇ ಯತ್ರ ದೃಶ್ಯಂತೇ ವೃಷ್ಟಿಮಂತೋ ಬಲಾಹಕಾಃ ॥ ೩೮ ॥

---

೩೪. ಇಂದ್ರೋತ್ಸವವೆಂದರೇನು? ಅದು ಯಾವ ದೊಡ್ಡ ಉತ್ಸವ? ಆದರಿಂದ ನಾವೇಕೆ ಇಷ್ಟೊಂದು ಉತ್ಸಾಹ, ಹರ್ಷವನ್ನು ಹೊಂದಬೇಕು? ಎಂದು ಕೇಳಲು ನಂದಗೋಪನು ಕೃಷ್ಣನನ್ನು ಕುರಿತು,

೩೫. ಇಂದ್ರನೆಂದರೆ ಮೇಘಗಳಿಗೂ, ನೀರಿಗೂ ಅಧಿಪತಿಯು ನೂರು ಅಶ್ವಮೇಧಯಾಗವನ್ನು ಮಾಡಿರುವ ಪುಣ್ಯಾತ್ಮನು. ಇವನ ಪ್ರೇರಣೆಯಂತೆಯೇ ಮೇಘಗಳು ನೀರನ್ನು ಸುರಿಸುವುವು.

೩೬. ಆ ಮಳೆಯಿಂದ ಬೆಳೆದ ಸಸ್ಯಗಳನ್ನು ನಾವೆಲ್ಲರೂ ತಿಂದು ಜೀವಿಸುವೆವು. ದೇವತೆಗಳನ್ನು ಪೂಜಿಸಿ ಅವರನ್ನು ಸಂತುಷ್ಟಿಗೊಳಿಸುವೆವು.

೩೭. ಸಸ್ಯಗಳನ್ನು ತಿಂದು ಹಸುಗಳೆಲ್ಲವೂ ಪುಷ್ಟವಾಗುವುವು. ಸಂತೋಷಗೊಳ್ಳುವುವು. ಹೆಚ್ಚಾಗಿ ಹಾಲನ್ನು ಕೊಡುವುವು. ಕರುಗಳನ್ನು ಹಾಕುವುವು.

೩೮. ಯಾವ ಸ್ಥಳದಲ್ಲಿ ಮೋಡಗಳು ಮಳೆಸುರಿಸುವುವೋ ಅಲ್ಲಿನ ಭೂಮಿಯು ಸಸ್ಯಸಮೃದ್ಧಿಯಾಗಿ ಇರುವುದು. ಅಲ್ಲಿರುವ ಜನರು ತೃಪ್ತರಾಗಿರುವರು.

ಭೌಮಮೇತತ್ಪಯೋ ಗೋಭಿರ್ಧತ್ತೇ ಸೂರ್ಯಸ್ಯ ವಾರಿದಃ ।
ಪರ್ಜನ್ಯಃ ಸರ್ವಲೋಕಸ್ಯ ಭವಾಯ ಭುವಿ ವರ್ಷತಿ ॥ ೩೯ ॥

ತಸ್ಮಾತ್ಪ್ರಾವೃಷಿ ರಾಜಾನಃ ಶಕ್ರಂ ಸರ್ವೇ ಮುದಾನ್ವಿತಾಃ ।
ಮಹೇ ಸುರೇಶಮರ್ಘಂತಿ ವಯಮನ್ಯೇ ಚ ದೇಹಿನಃ ॥ ೪೦ ॥

॥ ವ್ಯಾಸ ಉವಾಚ ॥
ನಂದಗೋಪಸ್ಯ ವಚನಂ ಶ್ರುತ್ವೇತ್ಥಂ ಶಕ್ರಪೂಜನೇ ।
ಕೋಪಾಯ ತ್ರಿದಶೇಂದ್ರಸ್ಯ ಪ್ರಾಹ ದಾಮೋದರಸ್ತದಾ ॥ ೪೧ ॥

॥ ಕೃಷ್ಣ ಉವಾಚ ॥
ನ ವಯಂ ಕೃಷಿಕರ್ತಾರೋ ವಣಿಜ್ಯಾಜೀವಿನೋ ನ ಚ ।
ಗಾವೋಽಸ್ಮದ್ದೈವತಂ ತಾತ ವಯಂ ವನಚರಾ ಯತಃ ॥ ೪೨ ॥

ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿಸ್ತಥಾಪರಾ ।
ವಿದ್ಯಾಚತುಷ್ಟಯಂ ತ್ವೇತದ್ವಾರ್ತಾಮತ್ರ ಶೃಣುಷ್ವ ಮೇ ॥ ೪೩ ॥

---

೩೯. ಭೂಮಿಯಮೇಲಿರುವ ನೀರು ಸೂರ್ಯನ ಕಿರಣಗಳಮೂಲಕ ಮೋಡಗಳಲ್ಲಿ ಹೋಗಿ ಸೇರುವುದು. ಲೋಕಕಲ್ಯಾಣಕ್ಕೋಸ್ಕರವಾಗಿ ಇಂದ್ರನ ಆ ನೀರನ್ನು ಪುನಃ ಭೂಮಿಯ ಮೇಲೆ ಸುರಿಸುವನು.

೪೦. ಆದುದರಿಂದ ವರ್ಷಾಕಾಲದ ಕೊನೆದಿನಗಳಲ್ಲಿ ಎಲ್ಲಾ ರಾಜರೂ ನಾವೂ ಸಹ ಸಂತೋಷದಿಂದ ಇಂದ್ರನ ಉತ್ಸವವನ್ನು ಮಾಡುವುದು ಪದ್ಧತಿಯಾಗಿದೆ ಎಂದನು.

೪೧. ಈರೀತಿಯಾಗಿ ಆಡಿದ ನಂದಗೋಪನ ಮಾತನ್ನು ಕೇಳಿ ಕೃಷ್ಣನು ಇಂದ್ರನಿಗೆ ಕೋಪಬರುವಂತಹ ಮಾತುಗಳನ್ನಾಡಿದನು.

೪೨. ಎಲೈ ತಂದೆಯೇ, ನಾವು ಕೃಷಿಮಾಡುವ ರೈತರಲ್ಲ. ವ್ಯಾಪಾರ ಮಾಡಿ ಅದರಿಂದ ಜೀವಿಸುವುದೂ ಇಲ್ಲ. ಇಂತಹವರಿಗಾದರೆ ಇಂದ್ರನುಬೇಕು. ಇಂದ್ರನೇ ಅವರಿಗೆ ದೇವರು. ಆದರೆ ನಮಗೆ ಹಸುಗಳೇ ದೇವರು. ನಾವು ಕಾಡಿನಲ್ಲಿಯೇ ಸಂಚರಿಸುವವರು.

೪೩. ಕೃಷಿ, ವಾಣಿಜ್ಯ, ಆನ್ವೀಕ್ಷಕೀ ಎಂಬ ಮೂರೂ ದಂಡನೀತಿ ಎಂಬುದೂ ಈ ನಾಲ್ಕು ವಿದ್ಯೆಗಳು ಇವೆ. ಇದರ ವಿಷಯವನ್ನು ಹೇಳುವೆನು ಕೇಳು.

ಕೃಷಿರ್ವಣಿಜ್ಯಾ ತದ್ವಚ್ಚ ತೃತೀಯಂ ಪಶುಪಾಲನಂ ।
ವಿದ್ಯಾ ಹ್ಯೇತಾ ಮಹಾಭಾಗಾ ವಾರ್ತಾ ವೃತ್ತಿತ್ರಯಾಶ್ರಯಾ ॥ ४४ ॥

ಕರ್ಷಕಾಣಾಂ ಕೃಷಿರ್ವೃತ್ತಿಃ ಪಣ್ಯಂ ತು ಪಣಜೀವಿನಾಂ ।
ಅಸ್ಮಾಕಂ ಗಾಃ ಪರಾ ವೃತ್ತಿರ್ವಾರ್ತಾ ಭೇದೈರಿಯಂ ತ್ರಿಭಿಃ ॥ ४೫ ॥

ವಿದ್ಯಯಾ ಯೋ ಯಯಾ ಯುಕ್ತಸ್ತಸ್ಯ ಸಾ ದೈವತಂ ಮಹತ್ ।
ಸೈವ ಪೂಜ್ಯಾರ್ಚನೀಯಾ ಚ ಸೈವ ತಸ್ಯೋಪಕಾರಿಕಾ ॥ ४೬ ॥

ಯೋಽನ್ಯಸ್ಯಾಃ ಫಲಮಶ್ನನ್ವೈ ಪೂಜಯತ್ಯಪರಾಂ ನರಃ ।
ಇಹ ಚ ಪ್ರೇತ್ಯ ಚೈವಾಸೌ ತಾತ ನಾಪ್ನೋತಿ ಶೋಭನಂ ॥ ४೭ ॥

ಪೂಜ್ಯಂತಾಂ ಪ್ರಥಿತಾಃ ಸೀಮಾಃ ಸೀಮಾಂತಂ ಚ ಪುನರ್ವನಂ ।
ವನಾಂತಾ ಗಿರಯಃ ಸರ್ವೇ ಸಾ ಚಾಸ್ಮಾಕಂ ಪರಾ ಗತಿಃ ॥ ४೮ ॥

---

४४. ಕೃಷಿ, ವಾಣಿಜ್ಯ, ದಂಡನೀತಿಗಳು ಹೇಗೆ ಮೂರು ವಿದ್ಯಗಳೋ ಹಾಗೆಯೇ ಪಶುಪಾಲನೆಯೂ ಸಹ ಒಂದು ಶ್ರೇಷ್ಠವಾದ ವಿದ್ಯೆಯು.

४೫. ಉಳುವವರಿಗೆ ಕೃಷಿವೃತ್ತಿಯು ನಿಯತವಾದುದು. ಅಂಗಡಿಯನ್ನಿಟ್ಟು ಜೀವಿಸುವವರಿಗೆ ವ್ಯಾಪಾರ ನಿಯತವಾದುದುದು. ಹಾಗೆಯೇ ನಮಗೂ ಪಶುಪಾಲನೆಯು ಶ್ರೇಷ್ಠವಾದ ವೃತ್ತಿಯು.

४೬. ಯಾವಯಾವ ವಿದ್ಯೆಯು ಮನುಷ್ಯನಿಗೆ ನಿಯತವೋ ಅವನಿಗೆ ಅದೇ ದೇವರು. ಅದನ್ನೇ ಅವನು ಪೂಜಿಸಬೇಕು. ಹಾಗೆಯೇ ಅದು ಅವನಿಗೆ ಉಪಕಾರಮಾಡುವುದು.

४೭. ಒಂದು ವಿದ್ಯೆಯನ್ನವಲಂಭಿಸಿ ಅದರ ಪ್ರಯೋಜನವನ್ನು ಹೊಂದಿಯೂ ಸಹ ಅದನ್ನು ಬಿಟ್ಟುಬಿಟ್ಟು ಬೇರೆಯದನ್ನು ಸೇವಿಸಿದರೆ ಅವನಿಗೆ ಒಳ್ಳೆಯದಾಗುವುದಿಲ್ಲ.

४೮. ಆದುದರಿಂದ ಸೀವೀಗ ನಮಗನುಕೂಲವಾದ ಸಮೀಪದ ಅರಣ್ಯವನ್ನೂ, ಅದರ ಎಲ್ಲೆವರೆಗೂ ಪೂಜಿಸಿರಿ. ಅರಣ್ಯದೊಳಗಿರುವ ಪರ್ವತಗಳನ್ನು ಅರ್ಚಿಸಿರಿ. ಅದೇ ನಮಗೆ ಗತಿಯು.

ಗಿರಿಯಜ್ಞಸ್ತ್ವಯಂ ತಸ್ಮಾದ್ಗೋಯಜ್ಞಶ್ಚ ಪ್ರವರ್ತ್ಯತಾಂ ।
ಕಿಮಸ್ಮಾಕಂ ಮಹೇಂದ್ರೇಣ ಗಾವಃ ಶೈಲಾಶ್ಚ ದೇವತಾಃ ॥ ೪೯ ॥

ಮಂತ್ರಯಜ್ಞಪರಾ ವಿಪ್ರಾಃ ಸೀರಯಜ್ಞಾಶ್ಚ ಕರ್ಷಕಾಃ ।
ಗಿರಿಗೋಯಜ್ಞಶೀಲಾಶ್ಚ ವಯಮದ್ರಿವನಾಶ್ರಯಾಃ ॥ ೫೦ ॥

ತಸ್ಮಾದ್ಗೋವರ್ಧನಃ ಶೈಲೋ ಭವದ್ಭಿರ್ವಿವಿಧಾರ್ಹಣೈಃ ।
ಅರ್ಚ್ಯತಾಂ ಪೂಜ್ಯತಾಂ ಮೇಧ್ಯಂ ಪಶುಂ ಹತ್ವಾ ವಿಧಾನತಃ ॥ ೫೧ ॥

ಸರ್ವಘೋಷಸ್ಯ ಸಂದೋಹಾ ಗೃಹ್ಯಂತಾಂ ಮಾ ವಿಚಾರ್ಯತಾಂ ।
ಭೋಜ್ಯಂತಾಂ ತೇನ ವೈ ವಿಪ್ರಾಸ್ತಥಾನ್ಯೇ ಚಾಪಿ ವಾಂಛಕಾಃ ॥ ೫೨ ॥

ತಮರ್ಚಿತಂ ಕೃತೇ ಹೋಮೇ ಭೋಜಿತೇಷು ದ್ವಿಜಾತಿಷು ।
[illegible]ಪುಷ್ಪಕೃತಾಪೀಡಾಃ ಪರಿಗಚ್ಛಂತು ಗೋಗಣಾಃ ॥ ೫೩ ॥

---

೪೯. ಪರ್ವತಪೂಜೆಯನ್ನೂ, ಗೋವುಗಳ ಪೂಜೆಯನ್ನೂ ಮಾಡಿರಿ. ಇಂದ್ರನಿಂದ ನಮಗಾಗಬೇಕಾದುದೇನು? ಪರ್ವತ, ಹಸುಗಳೇ ನಮಗೆ ದೇವತೆಗಳು.

೫೦. ಬ್ರಾಹ್ಮಣರು ಮಂತ್ರಗಳನ್ನು ಪೂಜಿಸಬೇಕು. ರೈತರು ನೇಗಿಲನ್ನು ಪೂಜಿಸಬೇಕು. ಪರ್ವತ ವನ ಇವುಗಳ ಆಶ್ರಯದಲ್ಲಿರುವ ನಾವು ಪರ್ವತಗಳನ್ನೂ ಹಸುಗಳನ್ನೂ ಪೂಜಿಸಬೇಕು.

೫೧. ಆದುದರಿಂದ ಗೋವರ್ಧನವೆಂಬ ಪರ್ವತಕ್ಕೆ ಎಲ್ಲರೂ ಹೋಗಬೇಕು. ವಿವಿಧವಾದ ಪೂಜಾಸಾಮಗ್ರಿಗಳಿಂದ ಅದನ್ನು ಪೂಜಿಸಬೇಕು. ಪವಿತ್ರವಾದ ಪಶುಬಲಿಯನ್ನು ಕೊಟ್ಟು ಅರ್ಚಿಸಬೇಕು.

೫೨. ಅಕ್ಕಪಕ್ಕದ ಹಳ್ಳಿಯವರನ್ನೆಲ್ಲಾ ಕರೆಯಿರಿ. ಬ್ರಾಹ್ಮಣರನ್ನು ಊಟ ಉಪಚಾರಗಳಿಂದ ತೃಪ್ತಿಪಡಿಸಿ. ಯೋಚಿಸಬೇಡಿರಿ. ಇಷ್ಟಪಟ್ಟವರನ್ನೆಲ್ಲಾ ಆಹ್ವಾನಮಾಡಿರಿ.

೫೩. ಗೋವರ್ಧನ ಪರ್ವತವನ್ನು ಪೂಜಿಸಿ, ಹೋಮ ಮುಂತಾದುವುಗಳನ್ನು ನೆರವೇರಿಸಿ, ಬ್ರಾಹ್ಮಣರನ್ನು ಸಂತುಷ್ಟಿಪಡಿಸಿ, ಅನಂತರ ಪಸುಗಳನ್ನೆಲ್ಲಾ ಪುಷ್ಪಗಳಿಂದ ಅಲಂಕರಿಸಿಕೊಂಡು ಹೋಗಬೇಕು.

ಏತನ್ಮಮ ಮತಂ ಗೋಪಾಃ ಸಂಪ್ರೀತ್ಯಾ ಕ್ರಿಯತೇ ಯದಿ ।
ತತಃ ಕೃತಾ ಭವೇತ್ಪ್ರೀತಿರ್ಗವಾಮದ್ರೇಸ್ತಥಾ ಮಮ ॥ ೫೪ ॥

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ನಂದಾದ್ಯಾಸ್ತೇ ವ್ರಜೌಕಸಃ ।
ಪ್ರೀತ್ಯುತ್ಫುಲ್ಲಮುಖಾ ವಿಪ್ರಾಃ ಸಾಧು ಸಾಧ್ವಿತ್ಯಥಾಬ್ರುವನ್ ॥ ೫೫ ॥

ಶೋಭನಂ ತೇ ಮತಂ ವತ್ಸ ಯದೇತದ್ಭವತೋದಿತಂ ।
ತತ್ಕರಿಷ್ಯಾಮ್ಯಹಂ ಸರ್ವಂ ಗಿರಿಯಜ್ಞಃ ಪ್ರವರ್ತ್ಯತಾಂ ॥ ೫೬ ॥

ತಥಾ ಚ ಕೃತವಂತಸ್ತೇ ಗಿರಿಯಜ್ಞಂ ವ್ರಜೌಕಸಃ ।
ದಧಿಪಾಯಸಮಾಂಸಾದ್ಯೈರ್ದದುಃ ಶೈಲಬಲಿಂ ತತಃ ॥ ೫೭ ॥

ದ್ವಿಜಾಂಶ್ಚ ಭೋಜಯಾಮಾಸುಃ ಶತಶೋಽಥ ಸಹಸ್ರಶಃ ।
ಗಾವಃ ಶೈಲಂ ತತಶ್ಚಕ್ರುರರ್ಚಿತಾಸ್ತಂ ಪ್ರದಕ್ಷಿಣಂ ॥ ೫೮ ॥

---

೫೪. ಗೋಪರೆಲ್ಲರೂ ನಾವು ಹೇಳಿದಂತೆ ಕೇಳಿದರೆ ಗೋವುಗಳ ಮತ್ತು ಪರ್ವತದ ಪ್ರೀತಿಗೆ ಪಾತ್ರರಾಗುವಿರಿ ಎಂದನು.

೫೫. ಈರೀತಿಯಾಗಿ ಹೇಳಿದ ಗೋಪಾಲನ ಮಾತನ್ನು ಕೇಳಿ ಗೋಕುಲವಾಸಿಗಳೂ ನಂದಾದಿಗಳೂ ಬಹಳ ಸಂತೋಷಗೊಂಡರು. ಭಲಾ ಭಲಾ ಎಂಬುದಾಗಿ ಹೇಳುತ್ತಾ ಕೃಷ್ಣನನ್ನು ಕೊಂಡಾಡಿ ಅವನನ್ನು ಕುರಿತು,

೫೬. ಮಗು, ಕೃಷ್ಣ, ನಿನ್ನ ಅಭಿಪ್ರಾಯವು ಸರಿಯಾಗಿದೆ. ನೀನು ಹೇಳಿದಂತೆಯೇ ನಾವೆಲ್ಲರೂ ಗೋವರ್ಧನಪರ್ವತದ ಪೂಜೆಯನ್ನೇ ಮಾಡುವೆವು ಎಂದರು.

೫೭-೫೮. ಅನಂತರ ಎಲ್ಲರೂ ಗೋವರ್ಧನ ಪರ್ವತಕ್ಕೆ ಹೋದರು. ಮೊಸರು, ಹಾಲು, ಪಾಯಸ, ಮಾಂಸ ಮುಂತಾದ ಪೂಜಾಸಾಮಗ್ರಿಗಳಿಂದ ಪರ್ವತಕ್ಕೆ ಪೂಜೆಯನ್ನು ಮಾಡಿದರು. ಸಾವಿರಾರು ಜನ ಬ್ರಾಹ್ಮಣರಿಗೂ ಭೋಜನವನ್ನು ಮಾಡಿಸಿ ಅವರನ್ನು ಸಂತುಷ್ಟಿಪಡಿಸಿದರು. ಹಸುಗಳನ್ನು ಪೂಜಿಸಿ ಅಲಂಕರಿಸಿ ಪರ್ವತದ ಪ್ರದಕ್ಷಿಣೆಯನ್ನು ಮಾಡಿಸಿದರು.

ವೃಷಭಾಶ್ಚಾಭಿನರ್ದಂತಃ ಸತೋಯಾ ಜಲದಾ ಇವ ।
ಗಿರಿಮೂರ್ಧನಿ ಗೋವಿಂದಃ ಶೈಲೋऽಹಮಿತಿ ಮೂರ್ತಿಮಾನ್ ॥ ೫೯ ॥

ಬುಭುಜೇऽನ್ನಂ ಬಹುವಿಧಂ ಗೋಪವರ್ಯಾಹೃತಂ ದ್ವಿಜಾಃ ।
ಕೃಷ್ಣಸ್ತೇನೈವ ರೂಪೇಣ ಗೋಪೈಃ ಸಹ ಗಿರೇಃ ಶಿರಃ ॥ ೬೦ ॥

ಅಧಿರುಹ್ಯಾರ್ಚಯಾಮಾಸ ದ್ವಿತೀಯಾಮಾತ್ಮನಸ್ತನುಂ ।
ಅಂತರ್ಧಾನಂ ಗತೇ ತಸ್ಮಿನ್ಗೋಪಾ ಲಬ್ಧ್ವಾ ತತೋ ವರಾನ್ ।
ಕೃತ್ವಾ ಗಿರಿಮುಹಂ ಗೋಷ್ಠಂ ನಿಜಮಭ್ಯಾಯಯುಃ ಪುನಃ ॥ ೬೧ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇ ಗೋವರ್ಧನ-
ಗಿರಿಯಜ್ಞಪ್ರವರ್ತನಂ ನಾಮ ಸಪ್ತಾಶೀತ್ಯಧಿಕ-
ಶತತಮೋऽಧ್ಯಾಯಃ

---

೫೯. ಹೋರಿಗಳೂ ನೀರುತುಂಬಿದ ಮೋಡಗಳಂತೆ ಕಾಣುತ್ತಾ ಆನಂದದಿಂದ ಹೊರಟಿದ್ದವು. ಕೃಷ್ಣನು ಪರ್ವತ ಮೇಲ್ಭಾಗದಲ್ಲಿ ನಿಂತು ಪರ್ವತವೇ ಮನುಷ್ಯರೂಪವನ್ನು ಧರಿಸಿ ನಿಂತಿರುವುದೋ ಎಂಬಂತೆ ಕಾಣಿಸುತ್ತಿದ್ದನು.

೬೦-೬೧. ಬ್ರಾಹ್ಮಣರೆಲ್ಲರೂ ಸಂತುಷ್ಟರಾದನಂತರ ಕೃಷ್ಣನು ಗೋಪರೊಡನೆ ಪರ್ವತದ ತುದಿಗೆ ಹತ್ತಿದನು. ಅಲ್ಲಿ ಅವರೊಡನೆ ತನ್ನ ಬೇರೆ ಶರೀರವನ್ನು ಪೂಜಿಸಿದನು. ಅನಂತರ ಆ ಶರೀರವು ಅಂತರ್ಧಾನವಾಗಲು ಗೋಪರೆಲ್ಲರೂ ಕೃತಕೃತ್ಯರಾಗಿ ಎಲ್ಲರೊಡನೆ ತಮತಮ್ಮ ಊರುಗಳಿಗೆ ಹಿಂತಿರುಗಿದರು.

ಇಲ್ಲಿಗೆ ಶ್ರೀ ಬ್ರಹ್ಮಪುರಾಣದಲ್ಲಿ ಬಾಲಚರಿತೆಯಲ್ಲಿ ಗೋವರ್ಧನಪರ್ವತದ ಪೂಜೆ ಎಂಬ ನೂರೆಂಭತ್ತೇಳನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಅಷ್ಟಾಶೀತ್ಯಧಿಕಶತತಮೋಽಧ್ಯಾಯಃ

---

॥ ವ್ಯಾಸ ಉವಾಚ ॥

ಮಹೇ ಪ್ರತಿಹತೇ ಶಕ್ರೋ ಭೃಶಂ ಕೋಪಸಮನ್ವಿತಃ ।
ಸಂವರ್ತಕಂ ನಾಮ ಗಣಂ ತೋಯದಾನಾಮಥಾಬ್ರವೀತ್ ॥ ೧ ॥

॥ ಇಂದ್ರ ಉವಾಚ ॥

ಭೋ ಭೋ ಮೇಘಾ ನಿಶಮ್ಯೈತದ್ವದತೋ ವಚನಂ ಮಮ ।
ಆಜ್ಞಾನಂತರಮೇವಾಶು ಕ್ರಿಯತಾಮವಿಚಾರಿತಂ ॥ ೨ ॥

ನಂದಗೋಪಃ ಸುದುರ್ಬುದ್ಧಿರ್ಗೋಪೈರನ್ಯೈಃ ಸಹಾಯವಾನ್ ।
ಕೃಷ್ಣಾಶ್ರಯಬಲಾಧ್ಮಾತೋ ಮಹಭಂಗಮಚೀಕರತ್ ॥ ೩ ॥

---

### ನೂರೆಂಭತ್ತೆಂಟನೆಯ ಅಧ್ಯಾಯವು

೧. ವ್ಯಾಸನು ಹೇಳಿದನು—ಗೋವರ್ಧನಪರ್ವತದ ಪೂಜೋತ್ಸವವು ಮುಗಿಯಲು, ಇಂದ್ರನು ತನಗೆ ಪೂಜೆಮಾಡಲಿಲ್ಲವೆಂದು ಅತಿಕೋಪಗೊಂಡು ಸಂವರ್ತಕಗಳೆಂಬ ಮೇಘಗಳನ್ನು ಕರೆದು ಇಂತೆಂದನು.

೨. ಎಲೈ ಮೇಘಗಳೇ, ನನ್ನ ಮಾತನ್ನು ಕೇಳಿರಿ ಮತ್ತು ನಾನು ಆಜ್ಞೆಯನ್ನು ಮಾಡಿದರೆ ಅದನ್ನು ತಕ್ಷಣ ವಿಮರ್ಶೆಮಾಡದೆ ನೆರವೇರಿಸಬೇಕು.

೩. ಆ ದುಷ್ಟನಾದ ನಂದಗೋಪನು ಇತರ ಗೋಪರನ್ನೆಲ್ಲಾ ತನ್ನಂತೆಯೇ ಮಾಡಿಕೊಂಡು ಕೃಷ್ಣನು ಹೇಳಿದಂತೆ ಕೇಳುತ್ತಾ ನನಗೆ ವಿರುದ್ಧವಾಗಿ ಆಚರಿಸುತ್ತಿರುವನು.

ಆಜೀವೋ ಯಃ ಪರಂ ತೇಷಾಂ ಗೋಪತ್ವಸ್ಯ ಚ ಕಾರಣಂ ।
ತಾ ಗಾವೋ ವೃಷ್ಟಿಪಾತೇನ ಪೀಡ್ಯಂತಾಂ ವಚನಾನ್ಮಮ ॥ ೪ ॥

ಅಹಮಪ್ಯದ್ರಿಶೃಂಗಾಭಂ ತುಂಗಮಾರುಹ್ಯ ವಾರಣಂ ।
ಸಾಹಾಯ್ಯಂ ವಃ ಕರಿಷ್ಯಾಮಿ ವಾಯೂನಾಂ ಸಂಗಮೇನ ಚ ॥ ೫ ॥

॥ ವ್ಯಾಸ ಉವಾಚ ॥

ಇತ್ಯಾಜ್ಞಪ್ತಾಃ ಸುರೇಂದ್ರೇಣ ಮುಮುಚುಸ್ತೇ ಬಲಾಹಕಾಃ ।
ವಾತವರ್ಷಂ ಮಹಾಭೀಮಮಭಾವಾಯ ಗವಾಂ ದ್ವಿಜಾಃ ॥ ೬ ॥

ತತಃ ಕ್ಷಣೇನ ಧರಣೀ ಕಕುಭೋಽಂಬರಮೇವ ಚ ।
ಏಕಂ ಧಾರಾಮಹಾಸಾರಪೂರಣೇನಾಭವದ್ದ್ವಿಜಾಃ ॥ ೭ ॥

---

೪. ಗೋಪರಿಗೆಲ್ಲಾ ಗೋವುಗಳೇ ಪ್ರಾಣದಂತಿರುವವು. ಆ ಗೋವುಗಳ ಅಭಿವೃದ್ಧಿಯಿಂದ ಅವರು ಕೊಬ್ಬಿ ಮದೋನ್ಮತ್ತರಾಗಿರುವರು. ಆದುದರಿಂದ ಆ ಗೋವುಗಳನ್ನು ಅತಿವೃಷ್ಟಿಯಿಂದ ನಾಶಮಾಡಿರಿ. ನನ್ನ ಮಾತನ್ನು ಕೇಳಿ.

೫. ನಾನೂ ಕೂಡ ಪರ್ವತದಂತಿರುವ ಐರಾವತದಮೇಲೆ ಕುಳಿತು ಅಲ್ಲಿಗೆ ಬಂದು ನಿಮಗೆ ಸಹಾಯಮಾಡುವೆನು. ಜೊತೆಗೆ ವಾಯುವಿನ ಸಹಾಯವನ್ನೂ ಕೊಡುವೆನು ಎಂದನು.

೬. ಇಂದ್ರನ ಅಪ್ಪಣೆಯಾದೊಡನೆಯೇ ಮೋಡಗಳೆಲ್ಲವೂ ಅಲ್ಲಿಂದ ಹೊರಟವು. ಗಾಳಿಯು ಜೋರಾಯಿತು ಮಳೆ ಬರಲು ಪ್ರಾರಂಭಿಸಿತು. ಮಹಾ ಭಯಂಕರವಾದ ಈ ಪರಿಸ್ಥಿತಿಯನ್ನು ನೋಡಿ ಹಸುಗಳೆಲ್ಲವೂ ಹೆದರಿದವು.

೭. ಸ್ವಲ್ಪಹೊತ್ತಿನಲ್ಲಿಯೇ, ಧಾರಾಕಾರವಾಗಿ ಬೀಳುತ್ತಿರುವ ಮಳೆಯಿಂದ ಭೂಮಿಯೂ, ದಿಕ್ಕುಗಳೂ, ಆಕಾಶವೂ ಕಾಣದಂತಾಗಿ ಏಕಾಕಾರವಾದುವು.

ಗಾನಸ್ತು ತೇನ ಪತತಾ ವರ್ಷವಾತೇನ ವೇಗಿನಾ ।
ಧುತಾಃ ಪ್ರಾಣಾನ್ ಜಹುಃ ಸರ್ವಾಸ್ತಿರ್ಯಜ್ಮುಖಶಿರೋಧರಾಃ ॥ ೮ ॥

ಕ್ರೋಡೇನ ವತ್ಸಾನಾಕ್ರಮ್ಯ ತಸ್ಥುರನ್ಯಾ ದ್ವಿಜೋತ್ತಮಾಃ ।
ಗಾವೋ ವಿವತ್ಸಾಶ್ಚ ಕೃತಾ ವಾರಿಪೂರೇಣ ಚಾಪರಾಃ ॥ ೯ ॥

ವತ್ಸಾಶ್ಚ ದೀನವದನಾಃ ಪವನಾಕಂಪಿಕಂಧರಾಃ ।
ತ್ರಾಹಿ ತ್ರಾಹೀತ್ಯಲ್ಪಶಬ್ದಾಃ ಕೃಷ್ಣಮೂಚುರಿವಾರ್ತಕಾಃ ॥ ೧೦ ॥

ತತಸ್ತದ್ಗೋಕುಲಂ ಸರ್ವಂ ಗೋಗೋಪೀಗೋಪಸಂಕುಲಂ ।
ಅತೀವಾರ್ತಂ ಹರಿರ್ದೃಷ್ಟ್ವಾ ತ್ರಾಣಾಯಾಚಿಂತಯತ್ತದಾ ॥ ೧೧ ॥

ಏತತ್ಕೃತಂ ಮಹೇಂದ್ರೇಣ ಮಹಭಂಗವಿರೋಧಿನಾ ।
ತದೇತದಖಿಲಂ ಗೋಷ್ಠಂ ತ್ರಾತವ್ಯಮಧುನಾ ಮಯಾ ॥ ೧೨ ॥

---

೮. ಆ ಗಾಳಿಗೂ ಮಳೆಗೂ ಸಿಕ್ಕಿ ಅನೇಕ ಹಸುಗಳು ತೊಂದರೆ ಪಡುತ್ತಾ ಕೆಳಗುರುಳಿ ಕತ್ತುಗಳನ್ನು ತಿರುಗಿಸಿಕೊಂಡು ಪ್ರಾಣಬಿಟ್ಟವು.

೯. ಕೆಲವು ಗೋವುಗಳು ತಮ್ಮ ಕರುಗಳನ್ನು ಕಾಪಾಡಲು ಅವುಗಳನ್ನು ಮುಖಗಳಿಂದ ಮರೆಮಾಡಿಕೊಂಡವು. ಅನೇಕ ಕರುಗಳು ನೀರಿನ ಪ್ರವಾಹದಲ್ಲಿ ಕೊಚ್ಚಿಕೊಂಡುಹೋದವು

೧೦. ಕರುಗಳೆಲ್ಲವೂ ಗಾಳಿಯಲ್ಲಿ ಸಿಕ್ಕಿ ಒದ್ದಾಡುತ್ತಾ ಪ್ರವಾಹದಲ್ಲಿ ಕೊಚ್ಚಿಕೊಂಡುಹೋಗುತ್ತಾ ದೀನಸ್ವರದಿಂದ ಕೂಗಿಕೊಳ್ಳುತ್ತಿದ್ದವು. ಇದನ್ನು ನೋಡಿದರೆ ಕೃಷ್ಣಾ ನಮ್ಮನ್ನು ಕಾಪಾಡು ಎಂಬುದಾಗಿ ಕೇಳುತ್ತಿವೆಯೋ ಎಂಬಂತೆ ಇತ್ತು.

೧೧. ಸ್ವಲ್ಪಹೊತ್ತಿನ ಒಳಗಾಗಿಯೇ ಹಸುಗಳಿಂದಲೂ ಗೋಪಗೋಪಿಯರಿಂದಲೂ ಆವೃತವಾದ ಆ ಗೋಕುಲದಲ್ಲಿ ಎಲ್ಲೆಲ್ಲಿಯೂ ಆರ್ತನಾದವು ಕೇಳಬರುತ್ತಿತ್ತು. ಎಲ್ಲರೂ ದುಃಖದಿಂದ ಹಾಹಾಕಾರಮಾಡುತ್ತಿದ್ದರು. ಇದೆಲ್ಲವನ್ನೂ ನೋಡಿ ಕೃಷ್ಣನು ಈಗೇನುಮಾಡಬೇಕೆಂದು ಯೋಚಿಸಿದನು.

೧೨-೧೩. ಇವೆಲ್ಲವೂ ಇಂದ್ರನಿಂದಲೇ ನಡೆದಿದೆ. ತನಗೆ ಪೂಜೆಯನ್ನು ನಡೆಸಲಿಲ್ಲವೆಂದು ಇಂದ್ರನಿಗೆ ಸಿಟ್ಟು ಬಂದಿರುವುದು. ಆದಕ್ಕೋಸ್ಕ

ಇಮಮದ್ರಿಮಹಂ ವೀರ್ಯಾದುತ್ಪಾಟ್ಯೋರುಶಿಲಾತಲಂ ।
ಧಾರಯಿಷ್ಯಾಮಿ ಗೋಷ್ಠಸ್ಯ ಪೃಥುಚ್ಛತ್ರಮಿವೋಪರಿ ॥ ೧೩ ॥

॥ ವ್ಯಾಸ ಉವಾಚ ॥

ಇತಿ ಕೃತ್ವಾ ಮತಿಂ ಕೃಷ್ಣೋ ಗೋವರ್ಧನಮಹೀಧರಂ ।
ಉತ್ಪಾಟ್ಯೈಕಕರೇಣೈವ ಧಾರಯಾಮಾಸ ಲೀಲಯಾ ॥ ೧೪ ॥

ಗೋಪಾಂಶ್ಚಾಹ ಜಗನ್ನಾಥಃ ಸಮುತ್ಪಾಟಿತಭೂಧರಃ ।
ವಿಶಧ್ವಮತ್ರ ಸಹಿತಾಃ ಕೃತಂ ವರ್ಷನಿವಾರಣಂ ॥ ೧೫ ॥

ಸುನಿರ್ವಾತೇಷು ದೇಶೇಷು ಯಥಾಯೋಗ್ಯಮಿಹಾಸ್ಯತಾಂ ।
ಪ್ರವಿಶ್ಯ ನಾತ್ರ ಭೇತವ್ಯಂ ಗಿರಿಪಾತಸ್ಯ ನಿರ್ಭಯೈಃ ॥ ೧೬ ॥

ಇತ್ಯುಕ್ತಾಸ್ತೇನ ತೇ ಗೋಪಾ ವಿವಿಶುರ್ಗೋಧನೈಃ ಸಹ ।
ಶಕಟಾರೋಪಿತೈರ್ಭಾಂಡೈರ್ಗೋಪ್ಯಶ್ಚಾಸಾರಪೀಡಿತಾಃ ॥ ೧೭ ॥

---

ರಲೇ ಇಷ್ಟೆಲ್ಲಾ ಅನರ್ಥಗಳಾಗುತ್ತಿವೆ. ಈಗ ಏನಾದರೂ ಮಾಡಿ ಗೋಕುಲದವರನ್ನು ಕಾಪಾಡಬೇಕು. ಆದುದರಿಂದ ಈ ಗೋವರ್ಧನ ಪರ್ವತವನ್ನು ಛತ್ರಿಯಂತೆ ಎತ್ತಿ ಹಿಡಿದು ಈ ಮಳೆಯಿಂದ ಇವರೆಲ್ಲರನ್ನೂ ಕಾಪಾಡುವೆನು.

೧೪. ಈರೀತಿಯಾಗಿ ಯೋಚಿಸಿ ಕೃಷ್ಣನು ಗೋವರ್ಧನಪರ್ವತವನ್ನು ಒಂದೇ ಕೈಯಿನಿಂದ ಎತ್ತಿ ಹಿಡಿದನು.

೧೫–೧೬. ಅನಂತರ ಗೋಪರನ್ನು ಕುರಿತು, ಬನ್ನಿರಿ ಪರ್ವತದ ಕೆಳಗೆ ನಿಂತು ಮಳೆಯ ಭಯವನ್ನು ತಪ್ಪಿಸಿಕೊಳ್ಳಿರಿ. ಎಲ್ಲರೂ ಧೈರ್ಯವಾಗಿ ಬಂದು ನಿಂತುಕೊಳ್ಳಿರಿ. ಪರ್ವತವು ಬಿದ್ದುಹೋದೀತೆಂದು ಭಯಪಡಬೇಕಾದ ಆವಶ್ಯಕತೆಯಿಲ್ಲ.

೧೭. ಎಂದು ಹೇಳಲು ಗೋಪರೆಲ್ಲರೂ ತಮ್ಮತಮ್ಮ ಸಾಮಾನುಗಳನ್ನು ಗಾಡಿಗಳಲ್ಲಿ ಹೇರಿಕೊಂಡು ಹಸುಗಳನ್ನೆಲ್ಲಾ ಅಟ್ಟಿಕೊಂಡು ಜಾಗ್ರತೆಯಾಗಿ ಪರ್ವತದ ಕೆಳಕ್ಕೆ ಬಂದು ಸೇರಿದರು. ಮಳೆಯಿಂದ ತೊಂದರೆಪಡುತ್ತಿದ್ದ ಗೋಪಿಕಾಸ್ತ್ರೀಯರೆಲ್ಲರೂ ಸಹ ಬೇಗಬೇಗ ಬಂದರು.

ಕೃಷ್ಣೋಽಪಿ ತಂ ದಧಾರೈವಂ ಶೈಲಮತ್ಯಂತನಿಶ್ಚಲಂ ।
ವ್ರಜೌಕೋವಾಸಿಭಿರ್ಹರ್ಷವಿಸ್ಮಿತಾಕ್ಷೈರ್ನಿರೀಕ್ಷಿತಃ ॥ ೧೮ ॥

ಗೋಪಗೋಪೀಜನೈರ್ಹೃಷ್ಟೈಃ ಪ್ರೀತಿವಿಸ್ತಾರಿತೇಕ್ಷಣೈಃ ।
ಸಂಸ್ತೂಯಮಾನಚರಿತಃ ಕೃಷ್ಣಃ ಶೈಲಮಧಾರಯತ್ ॥ ೧೯ ॥

ಸಪ್ತರಾತ್ರಂ ಮಹಾಮೇಘಾ ವವರ್ಷುರ್ನಂದಗೋಕುಲೇ ।
ಇಂದ್ರೇಣ ಚೋದಿತಾ ಮೇಘಾ ಗೋಪಾನಾಂ ನಾಶಕಾರಿಣಾ ॥ ೨೦ ॥

ತತೋ ಧೃತೇ ಮಹಾಶೈಲೇ ಪರಿತ್ರಾತೇ ಚ ಗೋಕುಲೇ ।
ಮಿಥ್ಯಾಪ್ರತಿಜ್ಞೋ ಬಲಭಿದ್ವಾರಯಾಮಾಸ ತಾನ್ಘನಾನ್ ॥ ೨೧ ॥

ವ್ಯಭ್ರೇ ನಭಸಿ ದೇವೇಂದ್ರೇ ವಿತಥೇ ಶಕ್ರಮಂತ್ರಿತೇ ।
ನಿಷ್ಕ್ರಮ್ಯ ಗೋಕುಲಂ ಹೃಷ್ಟಃ ಸ್ವಸ್ಥಾನಂ ಪುನರಾಗಮತ್ ॥ ೨೨ ॥

---

೧೮-೧೯. ಗೋಕುಲದ ಗೋಪಿಯರೆಲ್ಲರೂ ಬಹಳ ಸಂತೋಷಗೊಂಡರು. ಎಲ್ಲರೂ ಕೃಷ್ಣನನ್ನು ಹೊಗಳುತ್ತಾ ಪ್ರೀತಿಪೂರ್ವಕವಾದ ದೃಷ್ಟಿಯಿಂದ ಅವನನ್ನು ನೋಡುತ್ತಾ ನಿಂತಿದ್ದರು. ಕೃಷ್ಣನೂ ಆ ಪರ್ವತವನ್ನು ಅಲುಗಾಡದಂತೆ ಹಿಡಿದುಕೊಂಡಿದ್ದನು.

೨೦. ಇಂದ್ರನ ಆಜ್ಞಾನುಸಾರವಾಗಿ ದೊಡ್ಡದೊಡ್ಡ ಮೋಡಗಳು ಏಳು ರಾತ್ರಿಗಳವರೆಗೂ ಒಂದೇಸಮನಾಗಿ ಮಳೆಗರೆದವು.

೨೧. ಕೃಷ್ಣನು ಆ ಮಳೆಯನ್ನು ತಡೆಯಲು ಪರ್ವತವನ್ನು ಎತ್ತಿ ಹಿಡಿದು ಗೋಕುಲವನ್ನು ರಕ್ಷಿಸಲು ಇಂದ್ರನು ನಿರುಪಾಯನಾಗಿ ಮೇಘಗಳನ್ನೆಲ್ಲಾ ಹಿಂದಕ್ಕೆ ಕರೆಸಿದನು.

೨೨. ಅಂತರಿಕ್ಷವೆಲ್ಲವೂ ಮೋಡಗಳಿಲ್ಲದೆ ಸ್ವಚ್ಛವಾಯಿತು. ದೇವೇಂದ್ರನ ಉಪಾಯವೆಲ್ಲವೂ ವ್ಯರ್ಥವಾಯಿತು. ವ್ರಜವಾಸಿಗಳೆಲ್ಲರೂ ಅಲ್ಲಿಂದ ಹೊರಹೊರಟು ತಮ್ಮತಮ್ಮ ಸ್ಥಾನಗಳಿಗೆ ಹೋಗಿ ಸೇರಿದರು.

ವಮಿನೋಚ ಕೃಷ್ಣೋಽಪಿ ತದಾ ಗೋವರ್ಧನಮಹಾಗಿರಿಂ ।
ಸ್ವಸ್ಥಾನೇ ವಿಸ್ಮಿತಮುಖೈರ್ದೃಷ್ಟಸ್ತೈರ್ವ್ರಜವಾಸಿಭಿಃ ॥ ೨೩ ॥

॥ ವ್ಯಾಸ ಉವಾಚ ॥

ಧೃತೇ ಗೋವರ್ಧನೇ ಶೈಲೇ ಪರಿತ್ರಾತೇ ಚ ಗೋಕುಲೇ ।
ರೋಚಯಾಮಾಸ ಕೃಷ್ಣಸ್ಯ ದರ್ಶನಂ ಪಾಕಶಾಸನಃ ॥ ೨೪ ॥

ಸೋಽಧಿರುಹ್ಯ ಮಹಾನಾಗಮೈರಾವತಮಮಿತ್ರಜಿತ್ ।
ಗೋವರ್ಧನಗಿರೌ ಕೃಷ್ಣಂ ದದರ್ಶ ತ್ರಿದಶಾಧಿಪಃ ॥ ೨೫ ॥

ಚಾರಯಂತಂ ಮಹಾವೀರ್ಯಂ ಗಾಶ್ಚ ಗೋಪವಪುರ್ಧರಂ ।
ಕೃತ್ಸ್ನಸ್ಯ ಜಗತೋ ಗೋಪಂ ವೃತಂ ಗೋಪಕುಮಾರಕೈಃ ॥ ೨೬ ॥

ಗರುಡಂ ಚ ದದರ್ಶೋಚ್ಚೈರಂತರ್ಧಾನಗತಂ ದ್ವಿಜಾಃ ।
ಕೃತಚ್ಛಾಯಂ ಹರೇರ್ಮೂರ್ಧ್ನಿ ಪಕ್ಷಾಭ್ಯಾಂ ಪಕ್ಷಿಪುಂಗವಂ ॥ ೨೭ ॥

---

೨೩. ಅನಂತರ ಕೃಷ್ಣನು ಗೋವರ್ಧನ ಪರ್ವತವನ್ನು ಹಿಂದಿನಂತೆಯೇ ಇರಿಸಿ ಮನೆಗೆ ಹೋದನು. ವ್ರಜವಾಸಿಗಳೆಲ್ಲರೂ ಆನಂದಪಟ್ಟರು.

೨೪. ಇಷ್ಟೆಲ್ಲಾ ಆದನಂತರ ಇಂದ್ರನಿಗೆ ಏನಾದರೂ ಮಾಡಿ ಕೃಷ್ಣನ ದರ್ಶನವನ್ನು ಮಾಡಬೇಕೆಂಬ ಕುತೂಹಲವುಂಟಾಯಿತು.

೨೫. ಅದಕ್ಕೋಸ್ಕರವಾಗಿ ಇಂದ್ರನು ತನ್ನ ಐರಾವತವನ್ನೇರಿ ಗೋಕುಲಕ್ಕೆ ಬಂದನು. ಅಲ್ಲಿ ಗೋವರ್ಧನಪರ್ವತದ ಮೇಲಿರುವ ಕೃಷ್ಣನನ್ನು ನೋಡಿ ತಾನು,

೨೬. ಗೊಲ್ಲನ ವೇಷವನ್ನು ಧರಿಸಿ ಹಸುಗಳನ್ನು ಕಾಯುತ್ತಾ ಗೋಪಕುಮಾರರಿಂದ ಕೂಡಿ ಆಟವಾಡುತ್ತಿರುವ ಜಗತ್ತಿಗೆ ಒಡೆನಾದ ಕೃಷ್ಣನನ್ನು ಮತ್ತೊಮ್ಮೆ ನೋಡಿದನು.

೨೭. ಕೃಷ್ಣನ ತಲೆಯಮೇಲೆ ದೂರದಲ್ಲಿ ಗರುಡನು ಹಾರಾಡುತ್ತಾ ಅವನ ತಲೆಗೆ ನೆರಳನ್ನುಂಟುಮಾಡುತ್ತಿದ್ದನು. ಇಂದ್ರನು ನೋಡಿದ ಕೂಡಲೇ ಗರುಡನು ಅಂತರ್ಧಾನನಾದನು.

ಆರುಹ್ಯ ಸ ನಾಗೇಂದ್ರಾದೇಕಾಂತೇ ಮಧುಸೂದನಂ ।
ಏಕಃ ಸಸ್ಮಿತಮಾಹೇದಂ ಪ್ರೀತಿವಿಸ್ಫಾರಿತೇಕ್ಷಣಃ ॥ ೨೮ ॥

॥ ಇಂದ್ರ ಉವಾಚ ॥

ಕೃಷ್ಣ ಕೃಷ್ಣ ಶೃಣುಷ್ವೇದಂ ಯದರ್ಥಮಹಮಾಗತಃ ।
ತ್ವತ್ಸಮೀಪಂ ಮಹಾಬಾಹೋ ನೈತಚ್ಚಿಂತ್ಯಂ ತ್ವಯಾನ್ಯಥಾ ॥ ೨೯ ॥

ಭಾರಾವತರಣಾರ್ಥಾಯ ಪೃಥಿವ್ಯಾಃ ಪೃಥಿವೀತಲಂ ।
ಅವತೀರ್ಣೋಽಖಿಲಾಧಾರಸ್ತ್ವಮೇವ ಪರಮೇಶ್ವರ ॥ ೩೦ ॥

ಮಖಭಂಗವಿರುದ್ಧೇನ ಮಯಾ ಗೋಕುಲನಾಶಕಾಃ ।
ಸಮಾದಿಷ್ಟಾ ಮಹಾಮೇಘಾಸ್ತೈಶ್ಚೈತತ್ಕದನಂ ಕೃತಂ ॥ ೩೧ ॥

ತ್ರಾತಾಸ್ತಾಪಾತ್ತ್ವಯಾ ಗಾವಃ ಸಮುತ್ಪಾಟ್ಯ ಮಹಾಗಿರಿಂ ।
ತೇನಾಹಂ ತೋಷಿತೋ ವೀರ ಕರ್ಮಣಾತ್ಯದ್ಭುತೇನ ತೇ ॥ ೩೨ ॥

---

೨೮. ಬಳಿಕ ಇಂದ್ರನು ಐರಾವತದಿಂದ ಇಳಿದು ಕೃಷ್ಣನು ಒಬ್ಬನೇ ಇರುವ ಸಮಯವನ್ನು ನೋಡಿ ನಸುನಗುತ್ತಾ ಪ್ರೀತಿಯಿಂದ ಅವನನ್ನು ಕುರಿತು,

೨೯. ಓ ಕೃಷ್ಣ, ನೀನು ಮಹಾಬಲಶಾಲಿಯು. ನಾನು ಹೇಳುವುದನ್ನು ದಯವಿಟ್ಟು ಲಾಲಿಸು. ಅದಕ್ಕೋಸ್ಕರಲೇ ನಿನ್ನ ಸಮೀಪಕ್ಕೆ ನಾನು ಬಂದಿರುವೆನು. ಅನ್ಯಥಾ ಭಾವನೆ ಮಾಡಬೇಡ.

೩೦. ಪೃಥಿವಿಯ ಭಾರವನ್ನಿಳುಹಲು ಭೂಮಿಯಲ್ಲಿ ಅವತರಿಸಿರುವ ಮಹಾಮಹಿಮನು ನೀನು. ಜಗದಾಧಾರನೂ ಪ್ರಭುವೂ ನೀನೇ.

೩೧. ಇಂತಹ ನಿನ್ನನ್ನು ನಾನು ತಿಳಿಯದೆ ನಿಮ್ಮ ಉತ್ಸವವನ್ನು ನಾಶಪಡಿಸಲು ಪ್ರಯತ್ನಿಸಿದೆನು. ಅದಕ್ಕೋಸ್ಕರ ಗೋಕುಲವನ್ನೇ ನಾಶಮಾಡುವಂತಹ ಮಳೆಗರೆಯಲು ಮೋಡಗಳಿಗೆ ಆಜ್ಞಾಪಿಸಿದೆನು. ಅದಕ್ಕೆ ಇಂತಹ ಕದನವು ಸಂಭವಿಸಿತು.

೩೨. ಆಗ ನೀನು ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು ಗೋಪಗೋಪಿಯರನ್ನೂ, ಗೊವುಗಳನ್ನೂ ರಕ್ಷಿಸಿದೆ. ನೀನು ಮಾಡಿದ ಅದ್ಭುತವಾದ ಕೆಲಸವನ್ನು ನೋಡಿ ನನಗೆ ತುಂಬಾ ಆಶ್ಚರ್ಯವಾಗಿದೆ.

ಸಾಧಿತಂ ಕೃಷ್ಣ ದೇವಾನಾಮದ್ಯ ಮನ್ಯೇ ಪ್ರಯೋಜನಂ ।
ತ್ವಯಾಯಮದ್ರಿಪ್ರವರಃ ಕರೇಣೈಕೇನ ಚೋದ್ಧೃತಃ ॥ ೩೩ ॥

ಗೋಭಿಶ್ಚ ನೋದಿತಃ ಕೃಷ್ಣ ತ್ವತ್ಸಮೀಪಮಿಹಾಗತಃ ।
ತ್ವಯಾ ತ್ರಾತಾಭಿರತ್ಯರ್ಥಂ ಯುಷ್ಮತ್ಕಾರಣಕಾರಣಾತ್ ॥ ೩೪ ॥

ಸ ತ್ವಾಂ ಕೃಷ್ಣಾಭಿಷೇಕ್ಷ್ಯಾಮಿ ಗವಾಂ ವಾಕ್ಯಪ್ರಚೋದಿತಃ ।
ಉಪೇಂದ್ರತ್ವೇ ಗವಾಮಿಂದ್ರೋ ಗೋವಿಂದಸ್ತ್ವಂ ಭವಿಷ್ಯಸಿ ॥ ೩೫ ॥

ಅಥೋಪವಾಹ್ಯಾದಾದಾಯ ಘಂಟಾಮೈರಾವತಾದ್ಗಜಾತ್ ।
ಅಭಿಷೇಕಂ ತಯಾ ಚಕ್ರೇ ಪವಿತ್ರಜಲಪೂರ್ಣಯಾ ॥ ೩೬ ॥

ಕ್ರಿಯಮಾಣೇಽಭಿಷೇಕೇ ತು ಗಾವಃ ಕೃಷ್ಣಸ್ಯ ತತ್ಕ್ಷಣಾತ್ ।
ಪ್ರಸ್ರವೋದ್ಭೂತದುಗ್ಧಾರ್ದ್ರಾಂ ಸದ್ಯಶ್ಚಕ್ರುರ್ವಸುಂಧರಾಂ ॥ ೩೭ ॥

---

೩೩. ಆರೀತಿ ನೀನು ಒಂದೇ ಕೈಯಿಂದ ಪರ್ವತವನ್ನು ಎತ್ತಿ ಹಿಡಿದು ಎಲ್ಲರನ್ನೂ ಕಾಪಾಡಿದುದರಿಂದ ದೇವತೆಗಳಿಗೂ ಪ್ರಯೋಜನವಾಯಿತೆಂದು ನಾನು ತಿಳಿದಿರುತ್ತೇನೆ.

೩೪. ಆ ಪರ್ವತವು ಈಗ ನಿನ್ನ ಸಮೀಪದಲ್ಲಿಯೇ ಇರುವುದು. ನೀನು ರಕ್ಷಿಸಿದ ಗೋವುಗಳು ಆನಂದದಿಂದ ಅದರಲ್ಲಿ ಮೇಯುತ್ತಿರುವುವು. ಅದಕ್ಕೆಲ್ಲಾ ನೀನೇ ಕಾರಣನು.

೩೫. ಎಲೈ ಕೃಷ್ಣನೇ, ಹಸುಗಳ ಅಭಿಮತದಂತೆ ನೀನು ಹಸುಗಳಿಗೆ ಒಡೆಯನಾದುದರಿಂದ ಗೋವಿಂದನೆಂದು ನಿನಗೆ ಪಟ್ಟಾಭಿಷೇಕವನ್ನು ಮಾಡುವೆನು.

೩೬. ಎಂದು ಹೇಳಿ ಐರಾವತದ ಮೇಲಿನಿಂದ ಇಳಿದುಬಂದುಒಂದು ಘಂಟೆಯನ್ನು ತೆಗೆದುಕೊಂಡು ಪವಿತ್ರವಾದ ಜಲದಿಂದ ತುಂಬಿದ ಕಲಶದಿಂದ ಕೃಷ್ಣನಿಗೆ ಅಭಿಷೇಕಮಾಡಿದನು.

೩೭. ಅಭಿಷೇಕವಾದನಂತರ ಗೋವುಗಳೆಲ್ಲವೂ ಕೃಷ್ಣನು ಕುಳಿತಿದ್ದ ಜಾಗವನ್ನು ತಮ್ಮ ಹಾಲನ್ನು ಸುರಿಸಿ ನೆನೆಸಿದುವು.

ಅಭಿಷಿಚ್ಯ ಗವಾಂ ವಾಕ್ಯಾದ್ದೇವೇಂದ್ರೋ ವೈ ಜನಾರ್ದನಂ ।
ಪ್ರೀತ್ಯಾ ಸಪ್ರಶ್ರಯಂ ಕೃಷ್ಣಂ ಪುನರಾಹ ಶಚೀಪತಿಃ ॥ ೩೮ ॥

॥ ಇಂದ್ರ ಉವಾಚ ॥

ಗವಾಮೇತತ್ಕೃತಂ ವಾಕ್ಯಾತ್ತಥಾನ್ಯದಪಿ ಮೇ ಶೃಣು ।
ಯದ್ಬ್ರವೀಮಿ ಮಹಾಭಾಗ ಭಾರಾವತರಣೇಚ್ಛಯಾ ॥ ೩೯ ॥

ಮಮಾಂಶಃ ಪುರುಷವ್ಯಾಘ್ರಃ ಪೃಥಿವ್ಯಾಂ ಪೃಥಿವೀಧರ ।
ಅವತೀರ್ಣೋಽರ್ಜುನೋ ನಾಮ ಸ ರಕ್ಷ್ಯೋ ಭವತಾ ಸದಾ ॥ ೪೦ ॥

ಭಾರಾವತರಣೇ ಸಖ್ಯಂ ಸ ತೇ ವೀರಃ ಕರಿಷ್ಯತಿ ।
ಸ ರಕ್ಷಣೀಯೋ ಭವತಾ ಯಥಾತ್ಮಾ ಮಧುಸೂದನ ॥ ೪೧ ॥

---

೩೮. ಗೋವುಗಳ ಪ್ರಚೋದನೆಯಂತೆ ಇಂದ್ರನು ಕೃಷ್ಣನಿಗೆ ಅಭಿಷೇಕವನ್ನು ಮಾಡಿ ಅನಂತರ ಅವನನ್ನು ಕುರಿತು ವಿನಯಪೂರ್ವಕವಾಗಿ ಮತ್ತೆ ಹೇಳಿದನು—

೩೯. ಓ ಮಹಾಮಹಿಮನೇ, ಈಗ ಮಾಡಿದುದೆಲ್ಲವೂ ಗೋವುಗಳ ಪ್ರಚೋದನೆಯಂತೆ. ಆದರೆ ನನ್ನ ಮಾತನ್ನು ಸ್ವಲ್ಪ ಕೇಳು. ನಾನೀಗ ಹೇಳಲಿರುವುದು ಪೃಥಿವಿಯ ಭಾರವನಿಳುಹಲೋಸುಗವಾಗಿ.

೪೦. ಪೃಥಿವಿಯಲ್ಲಿ ಅರ್ಜುನನೆಂಬುವನು ಹುಟ್ಟಿರುವನು. ಅವನು ನನ್ನ ಅಂಶದವನು. ಪುರುಷಶ್ರೇಷ್ಠನವನು. ಅವನನ್ನು ನೀನು ಯಾವಾಗಲೂ ಕಾಪಾಡಬೇಕು.

೪೧. ಅವನು ನಿನಗೆ ಸ್ನೇಹಿತನಾಗುವನು. ನೀನು ಪ್ರಪಂಚದ ಭಾರವನ್ನಿಳುಹಲು ಪ್ರಯತ್ನಿಸಿದಾಗ ಅವನೂ ನಿನಗೆ ನೆರವಾಗುವನು. ಆದುದರಿಂದ ನೀನು ಅವನನ್ನು ನಿನ್ನ ಆತ್ಮದಂತೆ ಕಾಪಾಡಿಕೊಂಡು ಬರಬೇಕು ಎಂದನು.

॥ ಶ್ರೀಭಗವಾನುವಾಚ ॥

ಜಾನಾಮಿ ಭಾರತೇ ವಂಶೇ ಜಾತಂ ಪಾರ್ಥಂ ತವಾಂಶತಃ ।
ತಮಹಂ ಪಾಲಯಿಷ್ಯಾಮಿ ಯಾವದಸ್ಮಿ ಮಹೀತಲೇ ॥ ೪೨ ॥

ಯಾವನ್ಮಹೀತಲೇ ಶಕ್ರ ಸ್ಥಾಸ್ಯಾಮ್ಯಹಮರಿಂದಮ ।
ನ ತಾವದರ್ಜುನಂ ಕಶ್ಚಿದ್ದೇವೇಂದ್ರ ಯುಧಿ ಜೇಷ್ಯತಿ ॥ ೪೩ ॥

ಕಂಸೋ ನಾಮ ಮಹಾಬಾಹುರ್ದೈತ್ಯೋಽರಿಷ್ಟಸ್ತಥಾ ಪರಃ ।
ಕೇಶೀ ಕುವಲಯಾಪೀಡೋ ನರಕಾದ್ಯಾಸ್ತಥಾಪರೇ ॥ ೪೪ ॥

ಹತೇಷು ತೇಷು ದೇವೇಂದ್ರ ಭವಿಷ್ಯತಿ ಮಹಾಹವಃ ।
ತತ್ರ ವಿದ್ಧಿ ಸಹಸ್ರಾಕ್ಷ ಭಾರಾವತರಣಂ ಕೃತಂ ॥ ೪೫ ॥

ಸ ತ್ವಂ ಗಚ್ಛ ನ ಸಂತಾಪಂ ಪುತ್ರಾರ್ಥೇ ಕರ್ತುಮರ್ಹಸಿ ।
ನಾರ್ಜುನಸ್ಯ ರಿಪುಃ ಕಶ್ಚಿನ್ಮಮಾಗ್ರೇ ಪ್ರಭವಿಷ್ಯತಿ ॥ ೪೬ ॥

---

೪೨. ಅದಕ್ಕೆ ಕೃಷ್ಣನು ಹೌದು, ಭಾರತದಲ್ಲಿ ನಿನ್ನ ಅಂಶದಿಂದ ಹುಟ್ಟಿರುವ ಪಾರ್ಥನನ್ನು ನಾನು ಬಲ್ಲೆನು. ನಾನು ಭೂಲೋಕದಲ್ಲಿ ಇರುವವರೆಗೂ ಅವನನ್ನು ಕಾಪಾಡಿಕೊಂಡು ಬರುವೆನು.

೪೩. ನಾನು ಭೂಮಿಯಲ್ಲಿರುವವರೆಗೂ ಆ ಅರ್ಜುನನ್ನು ಯುದ್ಧದಲ್ಲಿ ಯಾರೂ ಸೋಲಿಸಲಾರರು.

೪೪-೪೫. ಕಂಸನೆಂಬ ಬಲಶಾಲಿಯಾದ ದೈತ್ಯನೂ ಅರಿಷ್ಟ, ಕೇಶಿ ಕುವಲಾಯಪೀಡ, ನರಕಾಸುರ, ಎಂಬ ಅನೇಕದೈತ್ಯರಿರುವರು. ಇವರನ್ನೆಲ್ಲಾ ಕೊಂದ ನಂತರ ಒಂದು ದೊಡ್ಡ ಯುದ್ಧವು ಜರುಗುವುದು. ಅಲ್ಲಿಗೆ ಭೂಭಾರವನ್ನು ಇಳುಹಿದಂತಾಗುವುದು.

೪೬-೪೭. ನೀನಿನ್ನು ಹೊರಡು. ನಿನ್ನ ಮಗನ ವಿಷಯದಲ್ಲಿ ಯೋಚಿಸಬೇಕಾದ ಅಗತ್ಯವಿಲ್ಲ. ನಾನು ಜೀವಂತನಾಗಿರುವವರೆಗೂ ಅರ್ಜುನ

ಅರ್ಜುನಾರ್ಥೇ ತ್ವಹಂ ಸರ್ವಾನ್ಯುಧಿಷ್ಠಿರಪುರೋಗಮಾನ್ ।
ನಿವೃತ್ತೇ ಭಾರತೇ ಯುದ್ಧೇ ಕುಂತ್ಯೈ ದಾಸ್ಯಾಮಿ ವಿಕ್ಷತಾನ್ ॥ ೪೭ ॥

॥ ವ್ಯಾಸ ಉವಾಚ ॥

ಇತ್ಯುಕ್ತಃ ಸಂಪರಿಷ್ವಜ್ಯ ದೇವರಾಜೋ ಜನಾರ್ದನಂ ।
ಆರುಹ್ಯೈರಾವತಂ ನಾಗಂ ಪುನರೇವ ದಿವಂ ಯಯೌ ॥ ೪೮ ॥

ಕೃಷ್ಣೋಽಪಿ ಸಹಿತೋ ಗೋಭಿರ್ಗೋಪಾಲೈಶ್ಚ ಪುನರ್ವ್ರಜಂ ।
ಆಜಗಾಮಾಥ ಗೋಪೀನಾಂ ದೃಷ್ಟಪೂತೇನ ವರ್ತ್ಮನಾ ॥ ೪೯ ॥

**ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇ ಗೋವಿಂದಾ-ಭಿಷೇಕವರ್ಣನಂ ನಾಮಾಷ್ಟಾಶೀತ್ಯಧಿಕಶತತಮೋಽಧ್ಯಾಯಃ**

---

ನನ್ನೆದುರಿಸುವ ಶತ್ರುವು ಹುಟ್ಟುವುದೂ ಇಲ್ಲ. ಭಾರತಯುದ್ಧ ನಡೆದನಂತರ ನಿನ್ನ ಮಗನಿಗೋಸ್ಕರ ಯುಧಿಷ್ಠಿರಾದಿಗಳನ್ನೆಲ್ಲಾ ಕುಂತಿಗೆ ಅರ್ಪಿಸುವೆನು ಎಂದನು.

೪೮. ಹೀಗೆ ಹೇಳಿದನಂತರ ಇಂದ್ರನು ಕೃಷ್ಣನನ್ನು ದೃಢವಾಗಿ ಆಲಿಂಗಿಸಿ ತನ್ನ ವಾಹನವಾದ ಐರಾವತದಮೇಲೆ ಕುಳಿತು ಅಮರಾವತಿಗೆ ತೆರಳಿದನು.

೪೯. ಕೃಷ್ಣನು ಹಸುಗಳು ಗೋಪಾಲರು ಇವರಗಳೊಡಗೂಡಿ ಗೋಕುಲಕ್ಕೆ ಹೊರಟನು. ಗೋಪಿಕಾಸ್ತ್ರೀಯರೆಲ್ಲರೂ ಇವನು ಬರುವುದನ್ನೇ ನಿರೀಕ್ಷಿಸುತ್ತಿದ್ದರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಬಾಲಚರಿತೆಯಲ್ಲಿ ಗೋವಿಂದನ ಅಭಿಷೇಕ ವರ್ಣನವೆಂಬ ನೂರತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾ ಪುರಾಣೇ ಬ್ರಾಹ್ಮೇ

## ಏಕೋನನವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಗತೇ ಶಕ್ರೇ ತು ಗೋಪಾಲಾಃ ಕೃಷ್ಣಮಕ್ಲಿಷ್ಟಕಾರಿಣಂ ।
ಊಚುಃ ಪ್ರೀತ್ಯಾ ಧೃತಂ ದೃಷ್ಟ್ವಾ ತೇನ ಗೋವರ್ಧನಾಚಲಂ ॥ ೧ ॥

॥ ಗೋಪಾ ಊಚುಃ ॥

ವಯಮಸ್ಮಾನ್ಮಹಾಭಾಗ ಭವತಾ ಮಹತೋ ಭಯಾತ್ ।
ಗಾವಶ್ಚ ಭವತಾ ತ್ರಾತಾ ಗಿರಿಧಾರಣಕರ್ಮಣಾ ॥ ೨ ॥

ಬಾಲಕ್ರೀಡೇಯಮತುಲಾ ಗೋಪಾಲತ್ವಂ ಜುಗುಪ್ಸಿತಂ ।
ದಿವ್ಯಂ ಚ ಕರ್ಮ ಭವತಃ ಕಿಮೇತತ್ತಾತ ಕಥ್ಯತಾಂ ॥ ೩ ॥

---

### ನೂರೆಂಭತ್ತೊಂಭತ್ತನೆಯ ಅಧ್ಯಾಯವು

೧. ವ್ಯಾಸನು ಹೇಳಿದನು :—ಇಂದ್ರನು ಹೊರಟುಹೋದ ನಂತರ ಗೋಪಾಲಕರೆಲ್ಲರೂ, ಸ್ವಲ್ಪವೂ ತೊಂದರೆಯಾಗದಂತೆ ಗೋವರ್ಧನಪರ್ವತವನ್ನು ಎತ್ತಿಹಿಡಿದ ಕೃಷ್ಣನನ್ನು ಕುರಿತು ಪ್ರೀತಿಯಿಂದ ಈರೀತಿ ಹೇಳಿದರು.

೨. ಓ ಮಹಾಮಹಿಮನೇ, ಭಯಭೀತರಾದ ನಮ್ಮನ್ನೂ ಹಸುಗಳನ್ನೂ ನೀನು ಪರ್ವತವನ್ನು ಎತ್ತಿಹಿಡಿದು ಕಾಪಾಡಿದೆ.

೩. ಜುಗುಪ್ಸೆಯನ್ನುಂಟುಮಾಡುವ ಗೋಪಾಲನ ಜನ್ಮದಲ್ಲಿ ಹುಟ್ಟಿ ಅದ್ಭುತವಾದ ಬಾಲಕ್ರೀಡೆಯನ್ನೂ, ದಿವ್ಯವಾದ ಕರ್ಮಗಳನ್ನೂ ತೋರಿಸಿದೆ.

ಕಾಲಿಯೋ ದಮಿತಸ್ತೋಯೇ ಪ್ರಲಂಬೋ ವಿನಿಪಾತಿತಃ ।
ಧೃತೋ ಗೋವರ್ಧನಶ್ಚಾಯಂ ಶಂಕಿತಾನಿ ಮನಾಂಸಿ ನಃ ॥ ೪ ॥

ಸತ್ಯಂ ಸತ್ಯಂ ಹರೇಃ ಪಾದೌ ಶ್ರಯಾಮೋಽಮಿತವಿಕ್ರಮ ।
ಯಥಾ ತ್ವದ್ವೀರ್ಯಮಾಲೋಕ್ಯ ನ ತ್ವಾಂ ಮನ್ಯಾಮಹೇ ನರಂ ॥ ೫ ॥

ದೇವೋ ವಾ ದಾನವೋ ವಾ ತ್ವಂ ಯಕ್ಷೋ ಗಂಧರ್ವ ಏವ ವಾ ।
ಕಿಂ ಚಾಸ್ಮಾಕಂ ವಿಚಾರೇಣ ಬಾಂಧವೋಽಸ್ತಿ ನಮೋಽಸ್ತು ತೇ ॥ ೬ ॥

ಪ್ರೀತಿಃ ಸಸ್ತ್ರೀಕುಮಾರಸ್ಯ ವ್ರಜಸ್ಯ ತವ ಕೇಶವ ।
ಕರ್ಮ ಚೇದಮಶಕ್ಯಂ ಯತ್ಸಮಸ್ತೈಸ್ತ್ರಿದಶೈರಪಿ ॥ ೭ ॥

ಬಾಲತ್ವಂ ಚಾತಿವೀರ್ಯಂ ಚ ಜನ್ಮ ಚಾಸ್ಮಾಸ್ವಶೋಭನಂ ।
ಚಿಂತ್ಯಮಾನಮಮೇಯಾತ್ಮಂಶಂಕಾಂ ಕೃಷ್ಣ ಪ್ರಯಚ್ಛತಿ ॥ ೮ ॥

---

೪. ಕಾಳಿಂದೀ ಮಡುವನ್ನು ಧುಮುಕಿ ಕಾಲೀಯಸರ್ಪನನ್ನು ಕೊಂದು ಹಾಕಿದೆ. ಪ್ರಲಂಬನನ್ನು ನಾಶಮಾಡಿದೆ. ಗೋವರ್ಧನ ಪರ್ವತವನ್ನು ಎತ್ತಿ ಹಿಡಿದೆ. ಇವೆಲ್ಲವನ್ನೂ ನೋಡಿದರೆ ನಮ್ಮ ಮನಸ್ಸಿಗೆಲ್ಲಾ ಅನುಮಾನ ವುಂಟಾಗಿರುವುದು.

೫. ಹರಿಯ ಪಾದಗಳನ್ನು ಸ್ಮರಿಸಿ ದಿಟವಾಗಿಯೂ ಹೇಳುವೆವು. ನಿನ್ನ ಪರಾಕ್ರಮವನ್ನು ನೋಡಿದರೆ ನೀನು ಮನುಷ್ಯನಲ್ಲವು.

೬. ನೀನು ದೇವನೋ, ದಾನವನೋ, ಯಕ್ಷನೋ, ಗಂಧರ್ವನೋ, ಯಾರೆಂಬುದು ಗೊತ್ತಾಗುವುದಿಲ್ಲ. ಹೋಗಲಿ, ಆ ವಿಚಾರದಿಂದ ನಮಗೇನು. ನೀನು ನಮಗೆ ಬಂಧುವಾದುದರಿಂದ ನಿನಗೆ ನಮಸ್ಕಾರವು.

೭–೮. ಗೋಕುಲದ ಸ್ತ್ರೀಪುರುಷರೆಲ್ಲರೂ ನಿನ್ನನ್ನು ಪ್ರೀತಿಸುವರು. ನೀನು ಮಾಡಿರುವ ಅದ್ಭುತವಾದ ಕೆಲಸಗಳನ್ನು ದೇವತೆಗಳೂ ಮಾಡಲಾರರು. ನಮಗೆ ಈರೀತಿ ಸಂಶಯ ಬರಲು ಮತ್ತೊಂದು ಕಾರಣವುಂಟು. ನಮ್ಮಲ್ಲಿ ಹುಟ್ಟಿವವನು ನಿನ್ನಂತೆ ಬಾಲ್ಯದಲ್ಲಿಯೇ ಅತಿಬಲಶಾಲಿಯಾಗಿರುವುದಿಲ್ಲ. ನಿನ್ನ ಸ್ವರೂಪವನ್ನು ಇಷ್ಟೆಂದು ಹೇಳಲಾಗುವುದಿಲ್ಲ. ಆದುದರಿಂದ ನಮ ಗುಂಟಾಗಿರುವ ಸಂಶಯವನ್ನು ನಿವಾರಿಸು ಎಂದರು.

॥ ವ್ಯಾಸ ಉವಾಚ ॥

ಕ್ಷಣಂ ಭೂತ್ವಾ ತ್ವಸೌ ತೂಷ್ಣೀಂ ಕಿಂಚಿತ್ಪ್ರಣಯಕೋಪವಾನ್ ।
ಇತ್ಯೇವಮುಕ್ತಸ್ತೈರ್ಗೋಪೈರಾಹ ಕೃಷ್ಣೋ ದ್ವಿಜೋತ್ತಮಾಃ ॥ ೯ ॥

॥ ಶ್ರೀಕೃಷ್ಣ ಉವಾಚ ॥

ಮತ್ಸಂಬಂಧೇನ ವೋ ಗೋಪಾ ಯದಿ ಲಜ್ಜಾ ನ ಜಾಯತೇ ।
ಶ್ಲಾಘ್ಯೋ ವಾಹಂ ತತಃ ಕಿಂ ವೋ ವಿಚಾರೇಣ ಪ್ರಯೋಜನಂ ॥ ೧೦ ॥

ಯದಿ ವೋಽಸ್ತಿ ಮಯಿ ಪ್ರೀತಿಃ ಶ್ಲಾಘ್ಯೋಽಹಂ ಭವತಾಂ ಯದಿ ।
ತದರ್ಥಾ ಬಂಧುಸದೃಶೀ ಬಾಂಧವಾಃ ಕ್ರಿಯತಾಂ ಮಯಿ ॥ ೧೧ ॥

ನಾಹಂ ದೇವೋ ನ ಗಂಧರ್ವೋ ನ ಯಕ್ಷೋ ನ ಚ ದಾನವಃ ।
ಅಹಂ ವೋ ಬಾಂಧವೋ ಜಾತೋ ನಾತಶ್ಚಿಂತ್ಯಮತೋಽನ್ಯಥಾ ॥ ೧೨ ॥

---

೯. ಎಲೈ ಮುನಿವರರೇ ಕೇಳಿರಿ, ಗೋಪರ ಮಾತನ್ನು ಕೇಳಿ ಕೃಷ್ಣನು ಸ್ವಲ್ಪಹೊತ್ತು ಸಿಟ್ಟುಬಂದವನಂತೆ ನಟಿಸುತ್ತಾ ಸುಮ್ಮನೆ ಕುಳಿತುಕೊಂಡನು. ಅನಂತರ ಅವರನ್ನು ಕುರಿತು,

೧೦. ನಿಮಗೆ ನಾಚಿಕೆಯಾಗದಿದ್ದಲ್ಲಿ ನನ್ನನ್ನು ನೀವು ಹೊಗಳುತ್ತಿರುವುದು ಸರಿಯಾಗಿದೆ. ಬೇರೇ ವಿಚಾರ ಕಟ್ಟಿಕೊಂಡು ಪ್ರಯೋಜನವೇನು ?

೧೧. ನೀವು ನನ್ನನ್ನು ಪ್ರೀತಿಸುವವರಾದಲ್ಲಿ, ನಿಮ್ಮದೃಷ್ಟಿಯಿಂದ ನಾನು ಶ್ಲಾಘ್ಯನಾದಲ್ಲಿ ನನ್ನ ಬಂಧುಗಳಾದ ನೀವೆಲ್ಲರೂ ಬಂಧುವೆಂದು ನನ್ನನ್ನು ತಿಳಿಯಿರಿ.

೧೨. ನಾನು ದೇವನಲ್ಲ. ಗಂಧರ್ವನಾಗಲೀ, ಯಕ್ಷನಾಗಲೀ, ದಾನವನಾಗಲೀ ನಾನಲ್ಲ. ಆದರೆ ನಾನು ಯಾರೆಂದರೆ ನಿಮ್ಮ ಬಂಧುವು. ಅಷ್ಟೇ ಹೊರತು ಬೇರೆ ವಿಧವಾಗಿ ಚಿಂತಿಸುವ ಅಗತ್ಯವಿಲ್ಲ ಎಂದನು.

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ಹರೇರ್ವಾಕ್ಯಂ ಬಧ್ಧಮೌನಾಸ್ತತೋ ಬಲಂ ।
ಯಯುರ್ಗೋಪಾ ಮಹಾಭಾಗಾಸ್ತಸ್ಮಿನ್ಪ್ರಣಯಕೋಪಿನಿ ॥ ೧೩ ॥

ಕೃಷ್ಣಸ್ತು ವಿಮಲಂ ವ್ಯೋಮ ಶರಚ್ಚಂದ್ರಸ್ಯ ಚಂದ್ರಿಕಾಂ ।
ತಥಾ ಕುಮುದಿನೀ ಫುಲ್ಲಾಮಾಮೋದಿತದಿಗಂತರಾಂ ॥ ೧೪ ॥

ವನರಾಜೀಂ ತಥಾ ಕೂಜದ್ಭೃಂಗಮಾಲಾಮನೋರಮಾಂ ।
ವಿಲೋಕ್ಯ ಸಹ ಗೋಪೀಭಿರ್ಮನಶ್ಚಕ್ರೇ ರತಿಂ ಪ್ರತಿ ॥ ೧೫ ॥

ಸಹ ರಾಮೇಣ ಮಧುರಮತೀವ ವನಿತಾಪ್ರಿಯಂ ।
ಜಗೌ ಕಮಲಪಾದೋಽಸೌ ನಾಮ ತತ್ರ ಕೃತವ್ರತಃ ॥ ೧೬ ॥

ರಮ್ಯಂ ಗೀತಧ್ವನಿಂ ಶ್ರುತ್ವಾ ಸಂತ್ಯಜ್ಯಾವಸಥಾಂಸ್ತದಾ ।
ಆಜಗ್ಮುಸ್ತ್ವರಿತಾ ಗೋಪ್ಯೋ ಯತ್ರಾಸ್ತೇ ಮಧುಸೂದನಃ ॥ ೧೭ ॥

---

೧೩. ಶ್ರೀಕೃಷ್ಣನಾಡಿದಮಾತನ್ನು ಕೇಳಿ ಎಲ್ಲರೂ ಸುಮ್ಮನಾದರು. ಆಮೇಲೆ ಕೃಷ್ಣನು ಸಿಟ್ಟುಬಂದವನಂತೆ ನಟಿಸಲು ಎಲ್ಲರೂ ಬಲರಾಮನ ಹತ್ತಿರಕ್ಕೆ ಹೊರಟುಹೋದರು.

೧೪-೧೫. ಅಷ್ಟುಹೊತ್ತಿಗೆ ರಾತ್ರಿಯಾಯಿತು. ನಿರ್ಮಲವಾದ ಅಂತರಿಕ್ಷದಲ್ಲಿ ಶರಚ್ಚಂದ್ರನು ಉದಯಿಸಿದನು. ಆನಂದವಾದ ಬೆಳದಿಂಗಳು ಹರಡಿತು. ಕನ್ನೈದಿಲೆಗಳೆಲ್ಲಾ ಅರಳಿದವು. ಅವುಗಳ ಪರಿಮಳವು ದಿಗಂತದವರೆಗೂ ಹಬ್ಬಿತು. ಇಂತಹ ಮನೋಹರವಾದ ವನದಲ್ಲಿ ಅನೇಕ ಪುಷ್ಪಗಳರಳಿದವು. ಅವುಗಳ ಮಧುವನ್ನು ಕುಡಿಯಲು ಭೃಂಗಗಳು ಝೇಂಕಾರ ಮಾಡುತ್ತಾ ಇದ್ದವು. ಕೃಷ್ಣನು ಇವೆಲ್ಲವನ್ನೂ ನೋಡಿ ಗೋಪಿಕಾಸ್ತ್ರೀಯರೊಡನೆ ವಿಹರಿಸಲು ಆಸೆಪಟ್ಟನು.

೧೬. ಆಮೇಲೆ ಬಲರಾಮನೊಡನೆ ಕೂಡಿ ಗೋಪಿಕಾಸ್ತ್ರೀಯರಿಗೆ ಕೇಳಲು ಆನಂದವಾಗುವಂತೆ ಗೀತವನ್ನು ಹಾಡಿದನು.

೧೭. ರಮ್ಯವಾಗಿ ಹಾಡುತ್ತಿರುವುದನ್ನು ಕೇಳಿದ ಕೂಡಲೇ ಗೋಪಿಯರು ತಮ್ಮ ಕೆಲಸಗಳನ್ನೆಲ್ಲಾ ಬಿಟ್ಟು ಕೃಷ್ಣನಿರುವ ಬಳಿಗೆ ಬಂದು ಸೇರಿದರು.

**ಶನೈಃ ಶನೈರ್ಜಗೌ ಗೋಪೀ ಕಾಚಿತ್ತಸ್ಯ ಪದಾನುಗಾ ।**
**ದತ್ತಾವಧಾನಾ ಕಾಚಿಚ್ಚ ತಮೇವ ಮನಸಾಸ್ಮರತ್ ॥ ೧೮ ॥**

**ಕಾಚಿತ್ಕೃಷ್ಣೇತಿ ಕೃಷ್ಣೇತಿ ಚೋಕ್ತ್ವಾ ಲಜ್ಜಾಮುಪಾಯಯೌ ।**
**ಯಯೌ ಚ ಕಾಚಿತ್ಪ್ರೇಮಾನ್ಧಾ ತತ್ಪಾರ್ಶ್ವಮವಿಲಜ್ಜಿತಾ ॥ ೧೯ ॥**

**ಕಾಚಿದಾವಸಥಸ್ಯಾಂತಃ ಸ್ಥಿತ್ವಾ ದೃಷ್ಟ್ವಾ ಬಹಿರ್ಗುರುಂ ।**
**ತನ್ಮಯತ್ವೇನ ಗೋವಿಂದಂ ದಧ್ಯೌ ಮೀಲಿತಲೋಚನಾ ॥ ೨೦ ॥**

**ಗೋಪೀಪರಿವೃತೋ ರಾತ್ರಿಂ ಶರಚ್ಚಂದ್ರಮನೋರಮಾಂ ।**
**ಮಾನಯಾಮಾಸ ಗೋವಿಂದೋ ರಾಸಾರಂಭರಸೋತ್ಸುಕಃ ॥ ೨೧ ॥**

---

೧೮. ಅವರಲ್ಲಿ ಒಬ್ಬಳು ನಿಧಾನವಾಗಿ ಅವನ ಗೀತವನ್ನೇ ಅನುಸರಿಸಿ ಹಾಡಿದಳು. ಮತ್ತೊಬ್ಬಳು ಕೃಷ್ಣನು ಹಾಡುವುದನ್ನೇ ಆಲೈಸುತ್ತಿದ್ದಳು. ಮತ್ತೊಬ್ಬಳು ಕೃಷ್ಣನನ್ನೇ ಸ್ಮರಿಸುತ್ತಿದ್ದಳು.

೧೯-೨೦. ಒಬ್ಬಳು 'ಕೃಷ್ಣ, ಕೃಷ್ಣ' ಎಂದು ಬಾಯಿನಲ್ಲಿ ಹೇಳಿ ಅನಂತರ ತಾನು ಅಂದಿದ್ದಕ್ಕೆ ನಾಚಿಕೆಗೊಂಡಳು. ಮತ್ತೊಬ್ಬಳು ಪ್ರೇಮ ಪರವಶಳಾಗಿ ಸ್ವಲ್ಪವೂ ನಾಚಿಕೆಯಿಲ್ಲದೆ ಅವನ ಸಮೀಪದಲ್ಲಿಯೇ ಬಂದು ನಿಂತುಕೊಂಡಳು. ಇನ್ನೊಬ್ಬಳು ಮನೆಯೊಳಗೇ ಕುಳಿತು ಕೃಷ್ಣನ ಧ್ವನಿಯನ್ನು ಕೇಳಿದ ನಂತರ ಅಲ್ಲಿಗೆ ಹೊರಟಳು. ಆದರೆ ಹೊರಗಡೆ ದೊಡ್ಡವರು ಕುಳಿತಿದ್ದುದರಿಂದ ಒಳಗೇ ಇದ್ದು ತನ್ಮಯಳಾಗಿ ಕೃಷ್ಣನನ್ನು ಧ್ಯಾನಮಾಡಿದಳು.

೨೧. ಈರೀತಿ ಕೃಷ್ಣನು ಶರತ್ಕಾಲದ ಬೆಳದಿಂಗಳಿಂದ ಮನೋಹರವಾದ ಅಂದಿನ ರಾತ್ರಿಯನ್ನು ಗೋಪಿಯರೊಡನೆ ಕಳೆದನು. ಅನಂತರ ರಾಸಕ್ರೀಡೆಯನ್ನಾಡಲು ಅಭಿಲಾಷೆಪಟ್ಟನು.

ಗೋಪ್ಯಶ್ಚ ವೃನ್ದಶಃ ಕೃಷ್ಣಚೇಷ್ಟಾಭ್ಯಾಯತ್ತಮೂರ್ತಯಃ ।
ಅನ್ಯದೇಶಗತೇ ಕೃಷ್ಣೇ ಚೇರುರ್ವೃಂದಾವನಾಂತರಂ ॥ ೨೨ ॥

ಬದ್ಧ ಮನಸ್ತಾಸ್ತತೋ ಗೋಪ್ಯಃ ಕೃಷ್ಣದರ್ಶನಲಾಲಸಾಃ ।
ಕೃಷ್ಣಸ್ಯ ಚರಣೌ ರಾತ್ರೌ ದೃಷ್ಟ್ವಾ ವೃಂದಾವನೇ ದ್ವಿಜಾಃ ॥ ೨೩ ॥

ಏವಂ ನಾನಾಪ್ರಕಾರಾಸು ಕೃಷ್ಣಚೇಷ್ಟಾಸು ತಾಸು ಚ ।
ಗೋಪ್ಯೋ ವ್ಯಗ್ರಾಃ ಸಮಂ ಚೇರೂ ರಮ್ಯಂ ವೃಂದಾವನಂ ವನಂ ॥ ೨೪ ॥

ನಿವೃತ್ತಾಸ್ತಾಸ್ತತೋ ಗೋಪ್ಯೋ ನಿರಾಶಾಃ ಕೃಷ್ಣದರ್ಶನೇ ।
ಯಮುನಾತೀರಮಾಗಮ್ಯ ಜಗುಸ್ತಚ್ಚರಿತಂ ದ್ವಿಜಾಃ ॥ ೨೫ ॥

ತತೋ ದದೃಶುರಾಯಾಂತಂ ವಿಕಾಶಿಮುಖಪಂಕಜಂ ।
ಗೋಪ್ಯಸ್ತ್ರೈಲೋಕ್ಯಗೋಪ್ತಾರಂ ಕೃಷ್ಣಮಕ್ಲಿಷ್ಟಕಾರಿಣಂ ॥ ೨೬

---

೨೨. ಗೋಪಿಕಾಸ್ತ್ರೀಯರೆಲ್ಲರೂ ಗುಂಪಾಗಿ ಕೂಡಿದರು. ಕೃಷ್ಣನು ಅವರೆಲ್ಲರಕೂಡ ಚೇಷ್ಟೆಮಾಡುತ್ತಿದ್ದನು. ಕೃಷ್ಣನು ತಪ್ಪಿಸಿಕೊಂಡು ಹೋಗಲು ಅವರೆಲ್ಲರೂ ಅವನನ್ನು ಹಿಡಿಯಲು ಹೋಗುತ್ತಿದ್ದರು. ಈರೀತಿ ವೃಂದಾವನವನ್ನೆಲ್ಲಾ ಸುತ್ತಾಡಿದರು.

೨೩. ಗೋಪಿಯರೆಲ್ಲರೂ ಕೃಷ್ಣನನ್ನು ಹಿಡಿಯಲು ಹೋಗುವರು. ಆ ರಾತ್ರಿಯಲ್ಲಿ ಅವನು ಕಾಣಿಸುತ್ತಿರಲಿಲ್ಲವಾದುದರಿಂದ ಅವನ ಕಾಲುಹೆಜ್ಜೆಯ ಗುರುತುಗಳನ್ನೇ ನೋಡಿಕೊಂಡು ಅವನನ್ನು ನೋಡಬೇಕೆಂದು ಓಡುವರು.

೨೪. ಈರೀತಿ ನಾನಾವಿಧವಾಗಿ ಕೃಷ್ಣನು ಅವರನ್ನು ಚೇಷ್ಟೆಮಾಡುವನು ಗೋಪಿಯರೂ ಅವನಲ್ಲೇ ಮನಸ್ಸುಳ್ಳವರಾಗಿ ರಮ್ಯವಾದ ವೃಂದಾವನವನ್ನೆಲ್ಲಾ ಸುತ್ತಾಡಿದರು.

೨೫. ಅಷ್ಟಾದರೂ ಅವನನ್ನು ಕಾಣದೆ ನಿರಾಶರಾಗಿ ಎಲ್ಲರೂ ಯಮುನಾನದಿಯ ತೀರದಲ್ಲಿ ಕುಳಿತು ಅವನ ಆಟಗಳನ್ನು ವರ್ಣಿಸುತ್ತಾ ಹಾಡಿದರು.

೨೬. ಅಷ್ಟರಲ್ಲಿಯೇ ನಗುನಗುತ್ತಾ ತಮ್ಮ ಕಡೆಗೆ ಬರುತ್ತಿರುವ ತ್ರಿಲೋಕರಕ್ಷಕನಾದ ಕೃಷ್ಣನನ್ನು ನೋಡಿದರು.

ಕಾಚಿದಾಲೋಕ್ಯ ಗೋವಿಂದಮಾಯಾಂತಮತಿಹರ್ಷಿತಾ
ಕೃಷ್ಣ ಕೃಷ್ಣೇತಿ ಕೃಷ್ಣೇತಿ ಪ್ರಾಹೋತ್ಫುಲ್ಲವಿಲೋಚನಾ ॥ ೨೭ ॥

ಕಾಚಿದ್ಭ್ರೂಭಂಗುರಂ ಕೃತ್ವಾ ಲಲಾಟಫಲಕಂ ಹರಿಂ
ವಿಲೋಕ್ಯ ನೇತ್ರಭೃಂಗಾಭ್ಯಾಂ ಪಪೌ ತನ್ಮುಖಪಂಕಜಂ ॥ ೨೮ ॥

ಕಾಚಿದಾಲೋಕ್ಯ ಗೋವಿಂದಂ ನಿಮೀಲಿತವಿಲೋಚನಾ ।
ತಸ್ಯೈವ ರೂಪಂ ಧ್ಯಾಯಂತೀ ಯೋಗಾರೂಢೇವ ಸಾ ಬಭೌ ॥ ೨೯ ॥

ತತಃ ಕಾಂಚಿತ್ಪ್ರಿಯಾಲಾಪೈಃ ಕಾಂಚಿದ್ಭ್ರೂಭಂಗವೀಕ್ಷಿತೈಃ ।
ನಿನ್ಯೇಽನುನಯಮನ್ಯಾಶ್ಚ ಕರಸ್ಪರ್ಶೇನ ಮಾಧವಃ ॥ ೩೦ ॥

ತಾಭಿಃ ಪ್ರಸನ್ನಚಿತ್ತಾಭಿರ್ಗೋಪೀಭಿಃ ಸಹ ಸಾದರಂ ।
ರರಾಮ ರಾಸಗೋಷ್ಠೀಭಿರುದಾರಚರಿತೋ ಹರಿಃ ॥ ೩೧ ॥

---

೨೭. ಅವರಲ್ಲಿ ಒಬ್ಬಳು ಅವನನ್ನು ನೋಡುತ್ತಲೇ ಅತಿಸಂತೋಷದಿಂದ, ಕೃಷ್ಣ, ಕೃಷ್ಣ, ಎಂಬುದಾಗಿ ಕೂಗಿಕೊಂಡಳು.

೨೮. ಮತ್ತೊಬ್ಬಳು ಹುಬ್ಬುಗಳನ್ನು ವಕ್ರಮಾಡಿ ಮುಖವನ್ನು ಮೇಲಕ್ಕೆತ್ತಿ ತನ್ನ ಕಣ್ಣುಗಳಿಂದ ಭೃಂಗವು ಕಮಲಮಧುವನ್ನು ಕುಡಿಯುವಂತೆ ತೃಪ್ತಿಯಾಗಿ ಕೃಷ್ಣನ ಮುಖಕಮಲವನ್ನು ಕಣ್ಣುತುಂಬಾ ನೋಡಿದಳು.

೨೯. ಇನ್ನೊಬ್ಬಳು ಹರಿಯನ್ನು ನೋಡಿದಾಕ್ಷಣ ಕಣ್ಣುಗಳನ್ನು ಮುಚ್ಚಿ ಅವನ ರೂಪವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಯೋಗಿನಿಯಂತೆ ಕುಳಿತಳು.

೩೦. ಆಗ ಕೃಷ್ಣನು ಕೆಲವರನ್ನು ಒಳ್ಳೆಯಮಾತುಗಳಿಂದಲೂ, ಕೆಲವರನ್ನು ಹುಬ್ಬಿನ ಸಂಜ್ಞೆಯಿಂದಲೂ, ಕೆಲವರನ್ನು ಕಟಾಕ್ಷಗಳಿಂದಲೂ, ಮತ್ತೆ ಕೆಲವರನ್ನು ಕರಸ್ಪರ್ಶದಿಂದಲೂ ಸಮಾಧಾನಪಡಿಸಿದನು.

೩೧. ಅವರೆಲ್ಲರೂ ಆನಂದಪಟ್ಟರು. ಪ್ರಸನ್ನರಾದ ಅವರೊಡನೆ ರಾಸಕ್ರೀಡೆಗಳನ್ನಾಡುತ್ತಾ ಆನಂದದಿಂದ ಕಾಲಕಳೆದನು.

ರಾಸಮಂಡಲಬದ್ಧೋಽಪಿ ಕೃಷ್ಣಪಾರ್ಶ್ವಮನೂದ್ಗತಾ ।
ಗೋಪೀಜನೋ ನ ಚೈವಾಭೂದೇಕಸ್ಥಾನಸ್ಥಿರಾತ್ಮನಾ ॥ ೩೧ ॥

ಹಸ್ತೇ ಪ್ರಗೃಹ್ಯ ಚೈಕೈಕಾಂ ಗೋಪಿಕಾಂ ರಾಸಮಂಡಲಂ ।
ಚಕಾರ ಚ ಕರಸ್ಪರ್ಶನಿಮೀಲಿತದೃಶಂ ಹರಿಃ ॥ ೩೨ ॥

ತತಃ ಪ್ರವವೃತೇ ರಮ್ಯಾ ಚಲದ್ವಲಯನಿಸ್ವನೈಃ ।
ಅನುಯಾತಶರತ್ಕಾವ್ಯಗೇಯಗೀತಿರನುಕ್ರಮಾಂ ॥ ೩೪ ॥

ಕೃಷ್ಣಃ ಶರಚ್ಚಂದ್ರಮಸಂ ಕೌಮುದೀಕುಮುದಾಕರಂ ।
ಜಗೌ ಗೋಪೀಜನಸ್ತ್ವೇಕಂ ಕೃಷ್ಣನಾಮ ಪುನಃ ಪುನಃ ॥ ೩೫ ॥

ಪರಿವೃತ್ತಾ ಶ್ರಮೇಣೈಕಾ ಚಲದ್ವಲಯತಾಪಿನೀ ।
ದದೌ ಬಾಹುಲತಾಂ ಸ್ಕಂಧೇ ಗೋಪೀ ಮಧುವಿಘಾತಿನಃ ॥ ೩೬ ॥

---

೩೧. ರಾಸಕ್ರೀಡೆಯಲ್ಲಿ ಸ್ತ್ರೀಯರೆಲ್ಲರೂ ಗುಂಪಾಗಿ ಸೇರಿರುವರು. ಆಗ ಅವರೆಲ್ಲರೂ ಕೃಷ್ಣನ ಪಾರ್ಶ್ವದಲ್ಲೇ ಇರಬೇಕೆಂಬ ಅಭಿಪ್ರಾಯವುಳ್ಳವರಾದರೂ ಗುಂಡಾಗಿ ತಿರುಗುತ್ತಿದ್ದುದರಿಂದ ಒಂದೇ ಸ್ಥಾನದಲ್ಲಿ ನಿಲ್ಲಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ.

೩೨. ಒಬ್ಬೊಬ್ಬಳನ್ನಾಗಿ ತನ್ನ ಕೈಯಲ್ಲಿ ಹಿಡಿದುಕೊಂಡು ಮುಂದಕ್ಕೆ ಬಿಡುತ್ತಾ ರಾಸಕ್ರೀಡೆಯನ್ನಾಡಿದನು. ಆಗ ಅವರನ್ನು ಮುಟ್ಟಲು ಅವರು ಪ್ರೇಮವಶದಿಂದ ಅರ್ಧ ನಿಮೀಲಿನ ನೇತ್ರೆಯರಾಗುತ್ತಿದ್ದರು.

೩೪. ಆ ಸಮಯದಲ್ಲಿ ಗೋಪಿಯ ಕರಕಂಕಣಗಳ ಧ್ವನಿಯಿಂದ ಕೂಡಿದ ಶರತ್ಕಾಲದ ವರ್ಣನೆಯ ಗೀತಗಳು ರಮ್ಯವಾಗಿ ಕೇಳಿಸುತ್ತಿದ್ದವು.

೩೫. ಕೃಷ್ಣನು ಬೆಳದಿಂಗಳಿಂದ ಕನ್ನೈದಿಲೆಗಳನ್ನು ಅರಳುವಂತೆ ಮಾಡುವ ಶರಶ್ಚಂದ್ರನನ್ನು ಕುರಿತು ಹಾಡಿದನು. ಕೆಲವು ಗೋಪಿಯರು ಬಾರಿ ಬಾರಿಗೂ ಕೃಷ್ಣನ ಹೆಸರನ್ನೇ ಉಚ್ಚರಿಸುತ್ತಾ ಹಾಡಿದರು.

೩೬. ಒಬ್ಬಳು ಗುಂಪಿನಲ್ಲಿ ಸುತ್ತುವುದರಿಂದ ಅತಿಬಳಲಿದವಳಾಗಿ ತನ್ನ ತೋಳನ್ನು ಕೃಷ್ಣನ ಭುಜದಮೇಲೆ ಹಾಕಿದಳು.

**ಕಾಚಿತ್ಪ್ರವಿಲಸದ್ಬಾಹುಃ ಪರಿರಭ್ಯ ಚುಚುಂಬ ತಂ ।**
**ಗೋಪೀ ಗೀತಸ್ತುತಿವ್ಯಾಜನಿಪುಣಾ ಮಧುಸೂದನಂ ॥ ೩೭ ॥**

**ಗೋಪೀಕಪೋಲಸಂಶ್ಲೇಷಮಭಿಪದ್ಯ ಹರೇರ್ಭುಜೌ ।**
**ಪುಲಕೋದ್ಗಮಶಸ್ಯಾಯ ಸ್ವೇದಾಂಬುಘನತಾಂ ಗತೌ ॥ ೩೮ ॥**

**ರಾಸಗೇಯಂ ಜಗೌ ಕೃಷ್ಣೋ ಯಾವತ್ತಾರತರಧ್ವನಿಃ ।**
**ಸಾಧು ಕೃಷ್ಣೇತಿ ಕೃಷ್ಣೇತಿ ತಾವತ್ತಾ ದ್ವಿಗುಣಂ ಜಗುಃ ॥ ೩೯ ॥**

**ಗತೇಽನುಗಮನಂ ಚಕ್ರುರ್ವಲನೇ ಸಂಮುಖಂ ಯಯುಃ ।**
**ಪ್ರತಿಲೋಮಾನುಲೋಮೇನ ಭೇಜುರ್ಗೋಪಾಂಗನಾ ಹರಿಂ ॥ ೪೦ ॥**

---

೩೭. ಮತ್ತೊಬ್ಬಳು ಸಂಗೀತವನ್ನು ಹೇಳುವ ನೆಪದಿಂದ ತನ್ನ ಕೈಗಳಿಂದ ಕೃಷ್ಣನನ್ನು ಆಲಂಗಿಸಿ ಚುಂಬಿಸಿದಳು.

೩೮. ಆ ಗೋಪಿಯ ಕಪೋಲಗಳು ಶ್ರೀಕೃಷ್ಣನ ಭುಜಗಳಿಗೆ ತಾಕಿದುದರಿಂದ ಆ ಭುಜಗಳಲ್ಲಿ, ಹರ್ಷದಿಂದ ರೋಮಾಂಚವೂ, ಹೆಚ್ಚಾದ ಬೆವರೂ ಉಂಟಾಯಿತು.

೩೯. ಶ್ರೀಕೃಷ್ಣನು ರಾಸಕ್ರೀಡೆಯ ಸಮಯದಲ್ಲಿ ಉಚ್ಚಧ್ವನಿಯಿಂದ ಗೀತವನ್ನು ಹಾಡುತ್ತಿದ್ದನು. ಹಾಡಿದಾಗಲೆಲ್ಲಾ ಗೋಪಿಯರೆಲ್ಲರೂ 'ಸಾಧು ಕೃಷ್ಣ, ಸಾಧು' ಎಂದು ಹೇಳುತ್ತಾ ಅವನ ಧ್ವನಿಗಿಂತ ಎತ್ತರವಾದ ಧ್ವನಿಯಲ್ಲಿ ಹಾಡುತ್ತಿದ್ದರು.

೪೦. ಹರಿಯು ಹೊರಟರೆ ಗೋಪಿಯರೆಲ್ಲರೂ ಅವನನ್ನೇ ಅನುಸರಿಸುವರು. ಅವನು ತಿರುಗಿ ತೆರಳಲು ಅವನೆದುರಿಗೆ ಬಂದು ನಿಲ್ಲುವರು. ಅವನ ಹಿಂದೆ ಮುಂದೆ ಎಲ್ಲಾ ಕಡೆಯಲ್ಲಿಯೂ ಸುತ್ತಿಕೊಂಡು ಅವನು ಹೋಗುವಂತೆ ಮಾಡುತ್ತಿದ್ದರು.

ಸ ತದಾ ಸಹ ಗೋಪೀಭೀ ರರಾಮ ಮಧುಸೂದನಃ ।
ಸ ವರ್ಷಕೋಟಿಪ್ರತಿಮಃ ಕ್ಷಣಸ್ತೇನ ವಿನಾಭವತ್ ॥ ೪೧ ॥

ತಾ ವಾರ್ಯಮಾಣಾಃ ಪಿತೃಭಿಃ ಪತಿಭಿರ್ಭ್ರಾತೃಭಿಸ್ತಥಾ ।
ಕೃಷ್ಣಂ ಗೋಪಾಂಗನಾ ರಾತ್ರೌ ರಮಯಂತಿ ರತಿಪ್ರಿಯಾಃ ॥ ೪೨ ॥

ಸೋऽಪಿ ಕೈಶೋರಕವಯಾ ಮಾನಯನ್ಮಧುಸೂದನಃ ।
ರೇಮೇ ತಾಭಿರಮೇಯಾತ್ಮಾ ಕ್ಷಪಾಸು ಕ್ಷಪಿತಾಹಿತಃ ॥ ೪೩ ॥

ತದ್ಭರ್ತೃಷು ತಥಾ ತಾಸು ಸರ್ವಭೂತೇಷು ಚೇಶ್ವರಃ ।
ಆತ್ಮಸ್ವರೂಪರೂಪೋऽಸೌ ವ್ಯಾಪ್ಯ ಸರ್ವಮವಸ್ಥಿತಃ ॥ ೪೪ ॥

---

೪೧. ಆಗ ಮಧುಸೂದನನು ಆ ಗೋಪಿಯರೊಡನೆ ಕ್ರೀಡಿಸಿದನು. ಆ ಸಮಯವು ಅತಿರಮ್ಯವಾಗಿದ್ದಿತು. ಇಂತಹ ಸಮಯದಲ್ಲಿ ಆ ಹರಿಯು ಇಲ್ಲದಿದ್ದರೆ ಆಗಿನ ಒಂದೊಂದು ಕ್ಷಣವೂ ಒಂದು ಕೋಟಿ ವರ್ಷದಂತೆ ಆಗುತ್ತಿತ್ತು.

೪೨. ಗೋಪಿಯರನ್ನು ಅವರ ತಂದೆತಾಯಿಗಳೂ, ಅಣ್ಣಂದಿರೂ, ಪತಿಯರೂ ಕೃಷ್ಣನೆಡೆಗೆ ಹೋಗಬೇಡಿರೆಂದು ತಡೆದರೂ ಸಹ ಕೇಳದೆ ಅವರು ರಾತ್ರಿಯಾಗಲು ಅವನೊಡನೆ ಕ್ರೀಡಿಸಬೇಕೆಂಬ ಆಸೆಯಿಂದ ಕೃಷ್ಣನ ಹತ್ತಿರಕ್ಕೆ ಹೋಗುತ್ತಿದ್ದರು. ಮತ್ತು ರಾತ್ರಿಯಲ್ಲಾ ಕ್ರೀಡಿಸುತ್ತಿದ್ದರು.

೪೩. ಕಿಶೋರವಯಸ್ಸಿನಿಂದ ಕೂಡಿದ ಆ ಹರಿಯು ಆ ಗೋಪಿಯರೊಡನೆ ಆನಂದದಿಂದ ಅನೇಕರಾತ್ರಿಗಳು ಕ್ರೀಡಿಸಿದನು.

೪೪. ಆ ಹರಿಯು ಸರ್ವವ್ಯಾಪಿಯು. ಆ ಗೋಪಿಯರ ಪತಿಯರಲ್ಲಿಯೂ, ಗೋಪಿಯರಲ್ಲಿಯೂ, ಪ್ರಪಂಚದ ಪ್ರತಿಯೊಂದು ಪ್ರಾಣಿಯಲ್ಲಿಯೂ ಆತ್ಮರೂಪದಿಂದ ಇರುವವನು ಆ ಪ್ರಭುವು.

ಯಥಾ ಸಮಸ್ತಭೂತೇಷು ನಭೋಽಗ್ನಿಃ ಪೃಥಿವೀ ಜಲಂ ।
ವಾಯುಶ್ಚಾತ್ಮಾ ತಥೈವಾಸೌ ವ್ಯಾಪ್ಯ ಸರ್ವಮವಸ್ಥಿತಃ ॥ ೪೫ ॥

॥ ವ್ಯಾಸ ಉವಾಚ ॥

ಪ್ರದೋಷಾರ್ಧೇ ಕದಾಚಿತ್ತು ರಾಸಾಸಕ್ತೇ ಜನಾರ್ದನೇ ।
ತ್ರಾಸಯನ್ಸಮದೋ ಗೋಷ್ಠಾನರಿಷ್ಟಃ ಸಮುಪಾಗತಃ ॥ ೪೬ ॥

ಸತೋಯತೋಯದಾಕಾರಸ್ತೀಕ್ಷ್ಣಶೃಂಗೋಽರ್ಕಲೋಚನಃ ।
ಖುರಾಗ್ರಪಾತೈರತ್ಯರ್ಥಂ ದಾರಯನ್ಧರಣೀತಲಂ ॥ ೪೭ ॥

ಲೇಲಿಹಾನಃ ಸನಿಷ್ಪೇಷಂ ಜಿಹ್ವಯೋಷ್ಠೌ ಪುನಃ ಪುನಃ ।
ಸಂರಂಭಾಕ್ಷಿಪ್ತಲಾಂಗೂಲಃ ಕಠಿನಸ್ಕಂಧಬಂಧನಃ ॥ ೪೮ ॥

---

೪೫. ಪೃಥ್ವೀ, ಅಪ್ಪು, ವಾಯು, ತೇಜಸ್ಸು, ಆಕಾಶ ಈ ಪಂಚಭೂತಗಳು ಹೇಗೆ ಪ್ರಪಂಚದ ಪ್ರತಿಯೊಂದು ಪ್ರಾಣಿಗಳಲ್ಲಿಯೂ, ನಿಯತವಾಗಿರುವುದೋ ಹಾಗೆ ಶ್ರೀಹರಿಯು ಎಲ್ಲಾ ಪ್ರಾಣಿಗಳಲ್ಲಿಯೂ ವ್ಯಾಪಕನಾಗಿ ಇರುವನು.

೪೬. ಒಂದು ಸಾರಿ ಹರಿಯು ಪ್ರದೋಷಸಮಯದಲ್ಲಿ ರಾಸಕ್ರೀಡೆಯಾಡುತ್ತಿದ್ದನು. ಆಗ ಅರಿಷ್ಟನೆಂಬುವನು ಅಲ್ಲಿರುವವರನ್ನೆಲ್ಲಾ ಹೆದರಿಸುತ್ತಾ ಮದಿಸಿ ಅಲ್ಲಿಗೆ ಬಂದನು.

೪೭. ಅವನು ಮೋಡದಂತೆ ಕಪ್ಪಾಗಿದ್ದನು. ಅವನಿಗೆ ಚೂಪಾದ ಕೊಂಬುಗಳಿದ್ದವು. ಸೂರ್ಯನಂತೆ ತೀಕ್ಷ್ಣವಾದ ಕಣ್ಣುಗಳಿದ್ದವು. ಬರುವ ವೇಗದಲ್ಲಿ ಅವನ ಗೊರಸುಗಳ ಹೊಡೆತದಿಂದ ಭೂಮಿಯನ್ನು ಸೀಳಿಹಾಕುತ್ತಾ ಅಲ್ಲಿಗೆ ಬಂದನು.

೪೮. ನಾಲಗೆಯಿಂದ ತನ್ನ ತುಟಿಗಳನ್ನು ಮತ್ತೆ ಮತ್ತೆ ನೆಕ್ಕಿಕೊಳ್ಳುತ್ತಾ ಇದ್ದನು. ಗರ್ವದಿಂದ ತನ್ನ ಬಾಲವನ್ನು ಮೇಲಕ್ಕೆ ಎತ್ತಿದನು. ಅವನ ಬಾಹುಗಳು ಬಹಳ ಕಠಿನವಾಗಿದ್ದವು.

ಉವಗ್ರಕಕುದಾಭೋಗಃ ಪ್ರಮಾಣಾದ್ದುರತಿಕ್ರಮಃ ।
ವಿಣ್ಮೂತ್ರಾಲಿಪ್ತಪೃಷ್ಠಾಂಗೋ ಗವಾಮುದ್ವೇಗಕಾರಕಃ ॥ ೪೯ ॥

ಪ್ರಲಂಬಕಂಠೋಽಭಿಮುಖಸ್ತರುಘಾತಾಂಕಿತಾನನಃ ।
ಪಾತಯನ್ಸ ಗವಾಂ ಗರ್ಭಾನ್ದೈತ್ಯೋ ವೃಷಭರೂಪಧೃಕ್ ॥ ೫೦ ॥

ಸೂದಯಂಸ್ತರಸಾ ಸರ್ವಾನ್ವನಾನ್ಯಟತಿ ಯಃ ಸದಾ ।
ತತಸ್ತಮತಿಘೋರಾಕ್ಷಮವೇಕ್ಷ್ಯಾತಿಭಯಾತುರಾಃ ॥ ೫೧ ॥

ಗೋಪಾ ಗೋಪಸ್ತ್ರಿಯಶ್ಚೈವ ಕೃಷ್ಣ ಕೃಷ್ಣೇತಿ ಚುಕ್ರುಶುಃ ।
ಸಿಂಹನಾದಂ ತತಶ್ಚಕ್ರೇ ತಲಶಬ್ದಂ ಚ ಕೇಶವಃ ॥ ೫೨ ॥

ತಚ್ಛಬ್ದಶ್ರವಣಾಚ್ಚಾಸೌ ದಾಮೋದರಮುಖಂ ಯಯೌ ।
ಅಗ್ರನ್ಯಸ್ತವಿಷಾಣಾಗ್ರಃ ಕೃಷ್ಣಕುಕ್ಷಿಕೃತೇಕ್ಷಣಃ ॥ ೫೩ ॥

---

೪೯. ಅವನ ಹಿಳಲು ಎತ್ತರವಾಗಿ ಇತರ ಎತ್ತುಗಳಿಗಿರುವ ಹಿಳಲಿನ ಪ್ರಮಾಣಕ್ಕಿಂತ ಮೀರಿದ್ದಿತು. ಮಲಮೂತ್ರಾದಿಗಳಿಂದ ಅವನಂಗಾಂಗಗಳು ಲಿಪ್ತವಾಗಿದ್ದವು. ಅವ ಬರುವುದರಿಂದ ಗೋವುಗಳಿಗೆ ಹೆದರಿಕೆಯನ್ನುಂಟು ಮಾಡುತ್ತಿತ್ತು.

೫೦. ಆ ಪ್ರಲಂಬನು ಎದುರಿಗೆ ಸಿಕ್ಕಿದ ಮರಗಳನ್ನು ಕೆಡವುದರಿಂದ ಅದರ ಗುರುತು ಹಣೆಯಮೇಲೆ ಕಾಣಿಸುತ್ತಿತ್ತು. ಅವನು ಬಂದುದನ್ನು ನೋಡಿ ಅನೇಕ ಹಸುಗಳ ಗರ್ಭಪಾತವಾಗುತ್ತಿತ್ತು. ಇಂತಹ ಎತ್ತಿನ ರೂಪವನ್ನು ಧರಿಸಿದ ಪ್ರಲಂಬನು ಅಲ್ಲಿಗೆ ಬಂದನು.

೫೧-೫೨. ಈರೀತಿ ಎಲ್ಲರನ್ನೂ ಹೆದರಿಸುತ್ತಾ ವನದಲ್ಲೆಲ್ಲಾ ಓಡಾಡಿದನು. ಹೀಗೆ ಓಡಾಡುತ್ತಿರುದ ಅವನನ್ನು ನೋಡಿ ಗೋಪರೂ, ಗೋಪಿಯರೂ ‘ ಕೃಷ್ಣ, ಕೃಷ್ಣ ’ ಎಂದು ಕೂಗಿಕೊಂಡರು. ಆಗ ಕೇಶವನು ಸಿಂಹನಾದವನ್ನು ಮಾಡಿ ಚಪ್ಪಾಳೆ ಹೊಡೆದನು.

೫೩. ಆ ಶಬ್ದವನ್ನು ಕೇಳಿ ಪ್ರಲಂಬನು ಕೊಂಬನ್ನು ಮುಂದಕ್ಕೆ ಮಾಡಿಕೊಂಡು ಹರಿಯ ಹೊಟ್ಟೆಯಕಡೆಗೆ ಗುರಿಯಿಟ್ಟು ನೋಡುತ್ತಾ ಕೃಷ್ಣನ ಹತ್ತಿರಕ್ಕೆ ನುಗ್ಗಿ ಬಂದನು.

ಅಭ್ಯಧಾವತ ದುಷ್ಟಾತ್ಮಾ ದೈತ್ಯೋ ವೃಷಭರೂಪಧೃಕ್ ।
ಆಯಾಂತಂ ದೈತ್ಯವೃಷಭಂ ದೃಷ್ಟ್ವಾ ಕೃಷ್ಣೋ ಮಹಾಬಲಂ ॥ ೫೪ ॥

ನ ಚಚಾಲ ತತಃ ಸ್ಥಾನಾದವಜ್ಞಾಸ್ಮಿತಲೀಲಯಾ ।
ಆಸನ್ನಂ ಚೈವ ಜಗ್ರಾಹ ಗ್ರಾಹವನ್ಮಧುಸೂದನಃ ॥ ೫೫ ॥

ಜಘಾನ ಜಾನುನಾ ಕುಕ್ಷೌ ವಿಷಾಣಗ್ರಹಣಾಚಲಂ ।
ತಸ್ಯ ದರ್ಪಬಲಂ ಹತ್ವಾ ಗೃಹೀತಸ್ಯ ವಿಷಾಣಯೋಃ ॥ ೫೬ ॥

ಅಪೀಡಯದರಿಷ್ಟಸ್ಯ ಕಂಠಂ ಕ್ಲಿನ್ನಮಿವಾಂಬರಂ ।
ಉತ್ಪಾಟ್ಯ ಶೃಂಗಮೇಕಂ ಚ ತೇನೈವಾತಾಡಯತ್ತತಃ ॥ ೫೭ ॥

ಮಮಾರ ಸ ಮಹಾದೈತ್ಯೋ ಮುಖಾಚ್ಛೋಣಿತಮುದ್ವಮನ್ ।
ತುಷ್ಟುವುರ್ನಿಹತೇ ತಸ್ಮಿನ್ಗೋಪಾ ದೈತ್ಯೇ ಜನಾರ್ದನಂ ।
ಜಂಭೇ ಹತೇ ಸಹಸ್ರಾಕ್ಷಂ ಪುರಾ ದೇವಗಣಾ ಯಥಾ ॥ ೫೮ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇಽರಿಷ್ಟವಧನಿರೂಪಣಂ ನಾಮೋನನವತ್ಯಧಿಕಶತತಮೋಽಧ್ಯಾಯಃ

---

೫೪-೫೫. ಅತಿ ಕೋಪದಿಂದ ಓಡಿಬರುತ್ತಿರುವ ವೃಷಭರೂಪಿಯಾದ ಪ್ರಲಂಬಾಸುರನನ್ನು ನೋಡಿ ಕೃಷ್ಣನು ನಿಂತ ಸ್ಥಳದಿಂದ ಸ್ವಲ್ಪವೂ ಅಲುಗಲಿಲ್ಲ. ತಿರಸ್ಕಾರದಿಂದ ನಗುತ್ತಾ ಹತ್ತಿರ ಬಂದ ಅವನನ್ನು ಮೊಸಳೆಯಂತೆ ಹಿಡಿದನು.

೫೬. ಅವನ ಕೊಂಬನ್ನು ಬಿಗಿಯಾಗಿ ಹಿಡಿದುದರಿಂದ ಅವನ ಶೌರ್ಯ ಬಲವು ಅಡಗಿತು. ಆಗ ಹರಿಯು ತನ್ನ ಮಂಡಿಯಿಂದ ಅವನ ಹೊಟ್ಟೆಗೆ ಒದ್ದನು. ಮತ್ತು ಅವನ ಕತ್ತನ್ನು, ಬಟ್ಟೆಯನ್ನು ಹಿಂಡುವಂತೆ ಹಿಂಡಿದನು.

೫೭-೫೮. ಒಂದು ಕೊಂಬನ್ನು ಕಿತ್ತು ಅದರಿಂದಲೇ ಅವನನ್ನು ಹೊಡೆದನು. ಆ ಏಟಿನಿಂದ ಅಸುರನು ಬಾಯಿಂದ ರಕ್ತವನ್ನು ಕಾರುತ್ತಾ ಸತ್ತುಹೋದನು. ಅವನನ್ನು |ಹರಿಯು ಕೊಂದನಂತರ ಹರಿಯನ್ನು ಗೋಪರೆಲ್ಲರೂ, ಜಂಭಾಸುರನನ್ನು ಕೊಂದಮೇಲೆ ಇಂದ್ರನನ್ನು ದೇವತೆಗಳು ಸ್ತುತಿಸಿದಂತೆ ಸ್ತುತಿಸಿದರು.

ಶ್ರೀಬ್ರಹ್ಮಪುರಾಣದಲ್ಲಿ ಬಾಲಚರಿತೆಯಲ್ಲಿ ಅರಿಷ್ಟವಧೆ ಎಂಬ ನೂರಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ನವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಕಕುದ್ಮಿನಿ ಹತೇಽರಿಷ್ಟೇ ಧೇನುಕೇ ಚ ನಿಪಾತಿತೇ ।**
**ಪ್ರಲಂಬೇ ನಿಧನಂ ನೀತೇ ಧೃತೇ ಗೋವರ್ಧನಾಚಲೇ ॥ ೧ ॥**

**ದಮಿತೇ ಕಾಲಿಯೇ ನಾಗೇ ಭಗ್ನೇ ತುಂಗದ್ರುಮದ್ವಯೇ ।**
**ಹತಾಯಾಂ ಪೂತನಾಯಾಂ ಚ ಶಕಟೇ ಪರಿವರ್ತಿತೇ ॥ ೨ ॥**

**ಕಂಸಾಯ ನಾರದಃ ಪ್ರಾಹ ಯಥಾವೃತ್ತಮನುಕ್ರಮಾತ್ ।**
**ಯಶೋದಾದೇವಕೀಗರ್ಭಪರಿವರ್ತಾದ್ಯಶೇಷತಃ ॥ ೩ ॥**

---

## ನೂರತೊಂಭತ್ತನೆಯ ಅಧ್ಯಾಯವು

೧-೨. ವ್ಯಾಸಮಹರ್ಷಿಯು ಹೇಳತೊಡಗಿದನು ;—ಈ ರೀತಿಯಾಗಿ ವೃಷಭಾಕೃತಿಯಿಂದ ಬಂದ ಅರಿಷ್ಟನೂ, ಧೇನುಕನೂ ನಿಹತರಾದರು. ಪ್ರಲಂಬನೂ ಸಾವಿಗೀಡಾದನು. ಗೋವರ್ಧನ ಪರ್ವತವನ್ನು ಮೇಲಕ್ಕೆ ಎತ್ತಿದುದಾಯಿತು. ಕಾಲಿಯನೆಂಬ ದುಷ್ಟಸರ್ಪವನ್ನು ದಂಡಿಸಿದುದಾಯಿತು. ಉನ್ನತವಾದ ವೃಕ್ಷಗಳೆರಡೂ ಮುರಿಯಲ್ಪಟ್ಟುವು. ಪೂತನೆಯೂ ಪ್ರಾಣವನ್ನು ತೊರೆದಳು. ಶಕಟಾಸುರನೂ ಕೆಡವಲ್ಪಟ್ಟನು.

೩. ಇದೆಲ್ಲವೂ ಸಹ ವಸುದೇವನ ಮಕ್ಕಳಾದ ಕೃಷ್ಣ ಬಲರಾಮರ ಕೃತ್ಯಗಳೇ. ಆ ವಸುದೇವನು, ದೇವಕಿಯು ಪ್ರಸುವಿಸಿದೊಡನೆಯೇ ಆ ಶಿಶುವನ್ನು ಯಶೋದೆಯ ಬಳಿಯಲ್ಲಿಟ್ಟು ಆ ಯಶೋದೆಯ ಮಗಳನ್ನು ತನ್ನ ಪತ್ನಿಯ ಬಳಿಯಿರಿಸಿ ಬದಲಾವಣೆ ಮಾಡಿಬಿಟ್ಟನು, ಎಂಬುದಾಗಿ ನಾರದ ಮಹರ್ಷಿಯು ಮೊದಲಿಂದ ಹಿಡಿದು ಒಂದನ್ನೂ ಬಿಡದೆ ಎಲ್ಲ ಸಂಗತಿಯನ್ನೂ ಕಂಸನಿಗೆ ತಿಳಿಸಿದನು.

ಶ್ರುತ್ವಾ ತತ್ಸಕಲಂ ಕಂಸೋ ನಾರದಾದ್ದೇವದರ್ಶನಾತ್ ।
ವಸುದೇವಂ ಪ್ರತಿ ತದಾ ಕೋಪಂ ಚಕ್ರೇ ಸ ದುರ್ಮತಿಃ ॥ ೪ ॥

ಸೋಽತಿಕೋಪಾದುಪಾಲಭ್ಯ ಸರ್ವಯಾದವಸಂಸದಿ ।
ಜಗರ್ಹೇ ಯಾದವಾಂಶ್ಚಾಪಿ ಕಾರ್ಯಂ ಚೈತದಚಿಂತಯತ್ ॥ ೫ ॥

ಯಾವನ್ನ ಬಲಮಾರೂಢೌ ಬಲಕೃಷ್ಣೌ ಸುಬಾಲಕೌ ।
ತಾವದೇವ ಮಯಾ ವಧ್ಯಾವಸಾಧ್ಯೌ ರೂಢಯೌವನೌ ॥ ೬ ॥

ಚಾಣೂರೋಽತ್ರ ಮಹಾವೀರ್ಯೋ ಮುಷ್ಟಿಕಶ್ಚ ಮಹಾಬಲಃ ।
ಏತಾಭ್ಯಾಂ ಮಲ್ಲಯುದ್ಧೇ ತೌ ಘಾತಯಿಷ್ಯಾಮಿ ದುರ್ಮದೌ ॥ ೭ ॥

ಧನುರ್ಮಹಮಹಾಯಾಗವ್ಯಾಜೇನಾನೀಯ ತೌ ವ್ರಜಾತ್ ।
ತಥಾ ತಥಾ ಕರಿಷ್ಯಾಮಿ ಯಾಸ್ಯತಃ ಸಂಕ್ಷಯಂ ಯಥಾ ॥ ೮ ॥

---

೪–೫. ಹೀಗೆ ನಾರದನು ತಿಳಿಸಿದ ಮಾತನ್ನು ಕೇಳುತ್ತಲೇ ಆ ದುಷ್ಟನಾದ ಕಂಸನಿಗೆ ವಸುದೇವನಮೇಲೆ ಬಹಳ ಕೋಪವುಂಟಾಯಿತು. ಆಗ ಅವನು ತುಂಬಿದ ಯಾದವರ ಸಭೆಯಲ್ಲಿ ವಸುದೇವನನ್ನು ಬಹುವಾಗಿ ನಿಂದಿಸಿದುದಲ್ಲದೆ ಯಾದವರನ್ನೂ ಸಹ ಹೀಯಾಳಿಸಿದನು. ಬಳಿಕ ತಾನು ಈರೀತಿ ಮಾಡಬೇಕೆಂದು ಮನಸ್ಸಿನಲ್ಲಿ ಯೋಚಿಸಿದನು.

೬. ಈ ಬಲರಾಮ ಕೃಷ್ಣರು ಇನ್ನೂ ಎಳೆಯಹುಡುಗರಾಗಿರುವಾಗಲೇ, ಬಲಿಷ್ಠರಾಗುವ ಮೊದಲೇ ಇವರನ್ನು ನಾನು ಸಂಹರಿಸಬೇಕು. ಇವರು ಯುವಕರಾದಮೇಲೆ ಬಹು ಅಸಾಧ್ಯರಾಗುವರು.

೭. ಆದುದರಿಂದ ಈಗ ಮಹಾವೀರನಾದ ಚಾಣೂರನೂ, ಬಹು ಬಲಾಢ್ಯನಾದ ಮುಷ್ಟಿಕನೂ ಮಲ್ಲಯುದ್ಧದಲ್ಲಿ ಆ ಮದಾಂಧರನ್ನು ಕೊಲ್ಲುವಂತೆ ಮಾಡುವೆನು.

೮. ಅವರನ್ನು ಈಗ ಧನುರ್ಮಹವೆಂಬ ಯಜ್ಞದ ನೆಪದಮೇಲೆ ಗೋಕುಲದಿಂದ ಇಲ್ಲಿಗೆ ಕರೆಸುವೆನು. ಹೇಗಾದರೂ ಮಾಡಿ ಅವರು ನಾಶವಾಗುವಂತೆ ಏರ್ಪಡಿಸುವೆನು.

॥ ವ್ಯಾಸ ಉವಾಚ ॥

ಇತ್ಯಾಲೋಚ್ಯ ಸ ದುಷ್ಟಾತ್ಮಾ ಕಂಸೋ ರಾಮಜನಾರ್ದನೌ ।
ಹಂತುಂ ಕೃತಮತಿರ್ವೀರಮಕ್ರೂರಂ ವಾಕ್ಯಮಬ್ರವೀತ್ ॥ ೯ ॥

॥ ಕಂಸ ಉವಾಚ ॥

ಭೋ ಭೋ ದಾನಪತೇ ವಾಕ್ಯಂ ಕ್ರಿಯತಾಂ ಪ್ರೀಯತೇ ಮಮ ।
ಇತಃ ಸ್ಯಂದನಮಾರುಹ್ಯ ಗಮ್ಯತಾಂ ನಂದಗೋಕುಲಂ ॥ ೧೦ ॥

ವಸುದೇವಸುತೌ ತತ್ರ ವಿಷ್ಣೋರಂಶಸಮುದ್ಭವೌ ।
ನಾಶಾಯ ಕಿಲ ಸಂಭೂತೌ ಮಮ ದುಷ್ಟೌ ಪ್ರವರ್ಧತಃ ॥ ೧೧ ॥

ಧನುರ್ಮಹಮಹಾಯಾಗಶ್ಚತುರ್ದಶ್ಯಾಂ ಭವಿಷ್ಯತಿ ।
ಆನೇಯೌ ಭವತಾ ತೌ ತು ಮಲ್ಲಯುದ್ಧಾಯ ತತ್ರ ವೈ ॥ ೧೨ ॥

ಚಾಣೂರಮುಷ್ಟಿಕೌ ಮಲ್ಲೌ ನಿಯುದ್ಧಕುಶಲೌ ಮಮ ।
ತಾಭ್ಯಾಂ ಸಹಾನಯೋರ್ಯುದ್ಧಂ ಸರ್ವಲೋಕೋಽತ್ರ ಪಶ್ಯತು ॥ ೧೩ ॥

---

೯. ಹೀಗೆ ಆ ದುರಾತ್ಮನಾದ ಕಂಸನು ರಾಮಕೃಷ್ಣರನ್ನು ಕೊಲ್ಲಿಸಬೇಬೇಕೆಂದು ನಿರ್ಧರಿಸಿ ವೀರನಾದ ಅಕ್ರೂರನನ್ನು ಕರೆದು ಇಂತೆಂದನು.

೧೦. ಎಲೈ ಮಹಾ ದಾನಶೀಲನೇ, ನನ್ನ ಮಾತನ್ನು ನಡೆಸಿ ನನಗೆ ಪ್ರಿಯವನ್ನುಂಟುಮಾಡು. ಇಲ್ಲಿಂದ ತೇರನ್ನೇರಿ ನಂದಗೋಕುಲಕ್ಕೆ ಹೋಗು.

೧೧. ಅಲ್ಲಿ ಮಹಾವಿಷ್ಣುವಿನ ಅಂಶದಿಂದ, ಬಲರಾಮಕೃಷ್ಣರು, ವಸುದೇವನ ಮಕ್ಕಳಾಗಿ ಜನಿಸಿ ಬೆಳೆಯುತ್ತಿರುವರು. ಅವರು ನನ್ನನ್ನು ನಾಶಮಾಡಲೆಂದೇ ಹುಟ್ಟಿರುವರಂತೆ.

೧೨. ಬರುವ ಚತುರ್ದಶಿಯಲ್ಲಿ ಧನುರ್ಮಹವೆಂಬ ಮಹಾಯಾಗವು ನಡೆಯುವುದು. ಆ ಸಮಯದಲ್ಲಿ ಜರಗುವ ಮಲ್ಲಯುದ್ಧದಲ್ಲಿ ಭಾಗವಹಿಸಲು ನೀನು ಅವರನ್ನು ಕರೆತರಬೇಕು.

೧೩. ನನ್ನ ಕಡೆಯ ಜಟ್ಟಿಗಳಾದ ಚಾಣೂರ ಮತ್ತು ಮುಷ್ಟಿಕನೆಂಬುವರು ಈ ಮಲ್ಲಯುದ್ಧದಲ್ಲಿ ಚೆನ್ನಾಗಿ ನುರಿತವರು. ಅವರೊಡನೆ ಈ ರಾಮಕೃಷ್ಣರಿಬ್ಬರೂ ಕಾಳಗವಾಡುವುದನ್ನು ಜನರೆಲ್ಲರೂ ನೋಡಲಿ.

**ನಾಗಃ ಕುವಲಯಾಪೀಡೋ ಮಹಾಮಾತ್ರಪ್ರಚೋದಿತಃ ।**
**ಸ ತೌ ನಿಹಂಸ್ಯತೇ ಪಾಪೌ ವಸುದೇವಾತ್ಮಜೌ ಶಿಶೂ ॥ ೧೪ ॥**

**ತೌ ಹತ್ವಾ ವಸುದೇವಂ ಚ ನಂದಗೋಪಂ ಚ ದುರ್ಮತಿಂ ।**
**ಹನಿಷ್ಯೇ ಪಿತರಂ ಚೈವ ಉಗ್ರಸೇನಂ ಚ ದುರ್ಮತಿಂ ॥ ೧೫ ॥**

**ತತಃ ಸಮಸ್ತಗೋಪಾನಾಂ ಗೋಧನಾನ್ಯಖಿಲಾನ್ಯಹಂ ।**
**ವಿತ್ತಂ ಚಾಪಹರಿಷ್ಯಾಮಿ ದುಷ್ಟಾನಾಂ ಮದ್ವಧೈಷಿಣಾಂ ॥ ೧೬ ॥**

**ತ್ವಾಮೃತೇ ಯಾದವಾಶ್ಚೇಮೇ ದುಷ್ಟಾ ದಾನಪತೇ ಮಮ ।**
**ಏತೇಷಾಂ ಚ ವಧಾಯಾಹಂ ಪ್ರಯತಿಷ್ಯಾಮ್ಯನುಕ್ರಮಾತ್ ॥ ೧೭ ॥**

**ತತೋ ನಿಷ್ಕಂಟಕಂ ಸರ್ವಂ ರಾಜ್ಯಮೇತದಯಾದವಂ ।**
**ಪ್ರಸಾಧಿಷ್ಯೇ ತ್ವಯಾ ತಸ್ಮಾನ್ಮತ್ಪ್ರೀತ್ಯಾ ವೀರ ಗಮ್ಯತಾಂ ॥ ೧೮ ॥**

---

೧೪. ಮತ್ತು (ನನ್ನ ಅಪ್ಪಣೆಯಂತೆ) ಮಾವಟಿಗನಿಂದ ಪ್ರೇರೇಪಿಸಲ್ಪಟ್ಟ ಕುವಲಯಾಪೀಡವೆಂಬ ಮದ್ದಾನೆಯು, ವಸುದೇವನ ಮಕ್ಕಳಾದ ಆ ಹಾಳು ಹಸುಳೆಗಳನ್ನು ಕೊಂದುಹಾಕುವುದು.

೧೫. ಹೀಗೆ ಅವರಿಬ್ಬರನ್ನೂ ಕೊಲ್ಲಿಸಿದ ಬಳಿಕ ದುಷ್ಟಾತ್ಮರಾದ ವಸುದೇವನನ್ನೂ ನಂದನನ್ನೂ ಕೊಲ್ಲಿಸಿ, ಅನಂತರ ನನ್ನ ತಂದೆಯಾದ ಆ ದುರ್ಬುದ್ಧಿ ಉಗ್ರಸೇನನನ್ನೂ ಕೊಲ್ಲುವೆನು.

೧೬. ಬಳಿಕ ನನ್ನ ಸಾವನ್ನೇ ಬಯಸುತ್ತಿರುವ ಆ ಗೊಲ್ಲರೆಲ್ಲರ ಸಮಸ್ತವಾದ ಗೋಧನವನ್ನೂ, ಉಳಿದ ಹಣಕಾಸುಗಳೆಲ್ಲವನ್ನೂ ಕಸಿದುಕೊಂಡುಬಿಡುವೆನು.

೧೭. ಎಲೈ ದಾನಪತಿಯೇ, ನೀನೊಬ್ಬನು ಹೊರತು ಮಿಕ್ಕ ಈ ಯಾದವರೆಲ್ಲರೂ ಬಹು ದುಷ್ಟರಾದವರು. ಇವರನ್ನೂ ಸಹ ಕ್ರಮಕ್ರಮವಾಗಿ ಕೊಲ್ಲುತ್ತಾ ಬರುವೆನು.

೧೮. ಅನಂತರ ದುಷ್ಟರಾದ ಯಾದವರೆಲ್ಲರೂ ಸತ್ತು ನಿಷ್ಕಂಟಕವಾದ ಈ ರಾಜ್ಯದಲ್ಲಿ ನಿನ್ನೊಡನೆ ಸುಖವಾಗಿರುವೆನು. ಆದುದರಿಂದ, ಎಲೈ ವೀರನೇ ನೀನು ಗೋಕುಲಕ್ಕೆ ನಡೆ.

ಯಥಾ ಚ ಮಾಹಿಷಂ ಸರ್ಪಿರ್ದಧಿ ಚಾಪ್ಯುಪಹಾರ್ಯ ವೈ ।
ಗೋಪಾಃ ಸಮಾನಯಂತ್ಯಾಶು ತ್ವಯಾ ವಾಚ್ಯಾಸ್ತಥಾ ತಥಾ ॥ ೧೯ ॥

॥ ವ್ಯಾಸ ಉವಾಚ ॥

ಇತ್ಯಾಜ್ಞಪ್ತಸ್ತದಾಕ್ರೂರೋ ಮಹಾಭಾಗವತೋ ದ್ವಿಜಾಃ ।
ಪ್ರೀತಿಮಾನಭವತ್ಕೃಷ್ಣಂ ಶ್ವೋ ದ್ರಕ್ಷ್ಯಾಮೀತಿ ಸತ್ವರಃ ॥ ೨೦ ॥

ತಥೇತ್ಯುಕ್ತ್ವಾ ತು ರಾಜಾನಂ ರಥಮಾರುಹ್ಯ ಸತ್ವರಃ ।
ನಿಶ್ಚಕ್ರಾಮ ತದಾ ಪುರ್ಯಾ ಮಥುರಾಯಾ ಮಧುಪ್ರಿಯಃ ॥ ೨೧ ॥

॥ ವ್ಯಾಸ ಉವಾಚ ॥

ಕೇಶೀ ಚಾಪಿ ಬಲೋದಗ್ರಃ ಕಂಸದೂತಃ ಪ್ರಚೋದಿತಃ ।
ಕೃಷ್ಣಸ್ಯ ನಿಧನಾಕಾಂಕ್ಷೀ ವೃಂದಾವನಮುಪಾಗಮತ್ ॥ ೨೨ ॥

---

೧೯. ನೀನು ಹೋದೊಡನೆಯೇ ಆ ಗೋಪರು ಎಮ್ಮೆಯ ಮೊಸರನ್ನೂ ತುಪ್ಪವನ್ನೂ ತಂದು ನಿನ್ನನ್ನು ಸನ್ಮಾನಿಸುವಂತೆ. ಅವರೊಡನೆ ಆಯಾ ಮಾತುಗಳನ್ನಾಡುವವನಾಗು.

೨೦. ಎಲೈ ಬ್ರಾಹ್ಮಣಶ್ರೇಷ್ಠರೇ, ಈರೀತಿಯಾಗಿ ಕಂಸನ ಆಜ್ಞೆಯನ್ನು ಮಹಾಭಾಗವತೋತ್ತಮನಾದ ಆ ಅಕ್ರೂರನು ಪಡೆಯುತ್ತಲೇ, 'ನಾಳೆಯೇ ಕೃಷ್ಣನನ್ನು ಕಾಣುವೆನಲ್ಲಾ' ಎಂಬ ಸಡಗರದಿಂದ ಬಹುವಾಗಿ ಸಂತೋಷವನ್ನು ತಾಳಿದನು.

೨೧-೨೨. ಆಗ ಹಾಗೆಯೇ ಆಗಲೆಂದು ರಾಜನಾದ ಕಂಸನಿಗೆ ತಿಳಿಸಿ, ಅವನು ಬೇಗನೆ ರಥವನ್ನೇರಿ ಮಧುರಾ ನಗರದಿಂದ ಹೊರಟನು. ಈ ನಡುವೆ ಕಂಸನಿಂದ ಕಳುಹಿಸಲ್ಪಟ್ಟಿದ್ದ ಕೇಶಿಯೆಂಬ ಮಹಾಬಲಾಢ್ಯನಾದ ದಾನವನು ಕೃಷ್ಣನನ್ನು ಕೊಲ್ಲಬೇಕೆಂದು ಬೃಂದಾವನಕ್ಕೆ ಬಂದನು.

**ಸಖುರಕ್ಷತಭೂಪೃಷ್ಠಃ ಸಟಾಕ್ಷೇಪಧುತಾಂಬುದಃ ।**
**ಪುನರ್ವಿಕ್ರಾಂತಚಂದ್ರಾರ್ಕಮಾರ್ಗೋ ಗೋಪಾಂತಮಾಗಮತ್ ॥ ೨೩ ॥**

**ತಸ್ಯ ಹ್ರೇಷಿತಶಬ್ದೇನ ಗೋಪಾಲಾ ದೈತ್ಯವಾಜಿನಃ ।**
**ಗೋಪ್ಯಶ್ಚ ಭಯಸಂವಿಗ್ನಾ ಗೋವಿಂದಂ ಶರಣಂ ಯಯುಃ ॥ ೨೪ ॥**

**ತ್ರಾಹಿ ತ್ರಾಹೀತಿ ಗೋವಿಂದಸ್ತೇಷಾಂ ಶ್ರುತ್ವಾ ತು ತದ್ವಚಃ ।**
**ಸತೋಯಜಲದಧ್ವಾನಗಂಭೀರಮಿದಮುಕ್ತವಾನ್ ॥ ೨೫ ॥**

**॥ ಗೋವಿಂದ ಉವಾಚ ॥**

**ಅಲಂ ತ್ರಾಸೇನ ಗೋಪಾಲಾಃ ಕೇಶಿನಃ ಕಿಂ ಭಯಾತುರೈಃ ।**
**ಭವದ್ಭಿರ್ಗೋಪಜಾತೀಯೈರ್ವೀರವೀರ್ಯಂ ವಿಲೋಪ್ಯತೇ ॥ ೨೬ ॥**

---

೨೩. ಆ ಕೇಶಿಯೆಂಬ ದೈತ್ಯನು ಕುದುರೆಯ ವೇಷವನ್ನು ತಾಳಿ ಗೋಪಾಲಕನ ಬಳಿಗೆ ಬಂದನು. ಆ ಕುದುರೆಯ ಗೊರಸಿನ ಏಟಿನಿಂದ ನೆಲವು ಬಾಯಿಬಿಡುತ್ತಿತ್ತು. ಕತ್ತಿನಲ್ಲಿ ಹಾರಾಡುತ್ತಿದ್ದ ಕೇಸರಗಳು ತಗುಲಿ ಆಕಾಶವು ಚದುರಿಹೋಗುತ್ತಿತ್ತು. ಆ ಬೃಹದಾಕಾರದ ಕುದುರೆಯು ಸೂರ್ಯಚಂದ್ರರ ದಾರಿಯನ್ನು ಆಕ್ರಮಿಸಿ ಬೆಳೆದು ನಿಂತಿತ್ತು.

೨೪. ಆ ಕುದುರೆಯ ಹೇಷಾಧ್ವನಿಯನ್ನು (ಕೆನೆತ) ಕೇಳಿ ಗೋಪಿಯರೂ, ಗೋಪಾಲಕರೂ, ಭಯದಿಂದ ತತ್ತಳಿಸುತ್ತಾ ಶ್ರೀಕೃಷ್ಣನನ್ನು ಮರೆಹೊಕ್ಕರು.

೨೫. ಹೀಗೆ 'ಕಾಪಾಡು, ಕಾಪಾಡು' ಎಂದು ಅವರೆಲ್ಲರೂ ಮೊರೆಯಿಡುವುದನ್ನು ಕೇಳಿ, ಆ ಕೃಷ್ಣನು, ನೀರುತುಂಬಿದ ಮೇಘದ ಮೊಳಗಿನಂತೆ ತುಂಬಿದ ದನಿಯಲ್ಲಿ ಅವರನ್ನಿಂತೆಂದನು.

೨೬. ಎಲೈ ಗೋಪಾಲಕರೇ, ಈ ಕೇಶಿಗೇಕೆ ಹೆದರುವಿರಿ? ನಿಮ್ಮ ಭಯವನ್ನು ತೊರೆಯಿರಿ. ನೀವು ಭಯದಿಂದ ಕಂಗೆಟ್ಟು, ವೀರ ಚರ್ಯೆಯನ್ನೇ ಏಕೆ ಲೋಪಮಾಡಿಕೊಳ್ಳುವಿರಿ?

ಕಿಮನೇನಾಲ್ಪಸಾರೇಣ ಹ್ರೇಷಿತಾರೋಪಕಾರಿಣಾ ।
ದೈತೇಯಬಲವಾಹ್ಯೇನ ವಲ್ಗತಾ ದುಷ್ಟವಾಜಿನಾ ॥ ೨೭ ॥

ಏಹ್ಯೇಹಿ ದುಷ್ಟ ಕೃಷ್ಣೋಽಹಂ ಪೂಷ್ಣಸ್ತ್ವಿವ ಪಿನಾಕಧೃಕ್ ।
ಪಾತಯಿಷ್ಯಾಮಿ ದಶನಾನ್ವದನಾದಖಿಲಾಂಸ್ತವ ॥ ೨೮ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಸ ತು ಗೋವಿಂದಃ ಕೇಶಿನಃ ಸಂಮುಖಂ ಯಯೌ ।
ವಿವೃತಾಸ್ಯಶ್ಚ ಸೋಽಪ್ಯೇನಂ ದೈತೇಯಶ್ಚ ಉಪಾದ್ರವತ್ ॥ ೨೯ ॥

ಬಾಹುಮಾಭೋಗಿನಂ ಕೃತ್ವಾ ಮುಖೇ ತಸ್ಯ ಜನಾರ್ದನಃ ।
ಪ್ರವೇಶಯಾಮಾಸ ತದಾ ಕೇಶಿನೋ ದುಷ್ಟವಾಜಿನಃ ॥ ೩೦ ॥

ಕೇಶಿನೋ ವದನಂ ತೇನ ವಿಶತಾ ಕೃಷ್ಣಬಾಹುನಾ ।
ಶಾತಿತಾ ದಶನಾಸ್ತಸ್ಯ ಸಿತಾಭ್ರಾವಯವಾ ಇವ ॥ ೩೧ ॥

---

೨೭. ಸುಮ್ಮನೆ ಹ್ರೇಷಾಧ್ವನಿಯೊಂದನ್ನೇ ಹಿಡಿದು ಅಬ್ಬರಿಸುವ ಅತಿ ಬಲವುಳ್ಳ ಈ ತುಂಟಕುದುರೆಯು ಏನು ಮಾಡೀತು? ತಾನೂ ದೈತ್ಯನೆಂಬ ಬಲದಿಂದ ಸ್ವಲ್ಪ ಹಾರಾಡುವುದು.

೨೮. ಎಂದು ನುಡಿದು ಆ ಕೇಶಿಯನ್ನು ಕುರಿತು, ಎಲೈ ದುಷ್ಟನೆ, ಇತ್ತ ಬಾ, ಇತ್ತ ಬಾ. ನಾನೇ ಕೃಷ್ಣನು, ಪಿನಾಕಪಾಣಿಯು. ಪೂಷನ ಹಲ್ಲುಗಳನ್ನುದುರಿಸಿದಂತೆ ನಿನ್ನ ಬಾಯಿಂದ ಎಲ್ಲ ಹಲ್ಲುಗಳನ್ನೂ ಉದುರಿಸಿಬಿಡುವೆನು ಎಂದನು.

೨೯. ಎಲೈ, ಬ್ರಾಹ್ಮಣಶ್ರೇಷ್ಠರೇ, ಹೀಗೆ ಹೇಳಿ ಆ ಶ್ರೀಕೃಷ್ಣನು ಕೇಶಿಗೆ ಎದುರಾಗಿ ಹೋದನು. ಆ ದೈತ್ಯನೂ ಸಹ ಬಾಯಿ ತೆರೆದುಕೊಂಡು ಇವನಕಡೆಗೆ ನುಗ್ಗಿ ಬಂದನು.

೩೦. ಆಗ ಕೃಷ್ಣನು ತುಂಟಕುದುರೆಯ ವೇಷದಲ್ಲಿ ಬಂದಿದ್ದ ಆ ಕೇಶಿಯ ಬಾಯೊಳಕ್ಕೆ ತುಂಬಿದ ತನ್ನ ನಿಡುದೋಳನ್ನು ತುರುಕಿಬಿಟ್ಟನು.

೩೧. ಆ ಕೃಷ್ಣನ ತೋಳು ಬಾಯೊಳಕ್ಕೆ ಹೋಗುತ್ತಲೇ, ಅವನ ಬಾಯಿಂದ ಬಿಳಿದಾದ ಮೋಡದ ತುಂಡುಗಳಂತೆ ಹಲ್ಲುಗಳು ತಪತಪನೆ ಉದುರಿಹೋದುವು.

ಕೃಷ್ಣಸ್ಯ ವವೃಧೇ ಬಾಹುಃ ಕೇಶಿದೇಹಗತೋ ದ್ವಿಜಾಃ ।
ವಿನಾಶಾಯ ಯಥಾ ವ್ಯಾಧಿರಾಪ್ತಭೂತೈರುಪೇಕ್ಷಿತಃ ॥ ೩೨ ॥

ವಿಪಾಟಿತೌಷ್ಠೋ ಬಹುಲಂ ಸಫೇನಂ ರುಧಿರಂ ವಮನ್ ।
ಸೃಕ್ಕಣೀ ವಿವೃತೇ ಚಕ್ರೇ ವಿಶ್ಲಿಷ್ಟೇ ಮುಕ್ತಬಂಧನೇ ॥ ೩೩

ಜಗಾಮ ಧರಣೀಂ ಪಾದೈಃ ಶಕೃನ್ಮೂತ್ರಂ ಸಮುತ್ಸೃಜನ್ ।
ಸ್ವೇದಾರ್ದ್ರಗಾತ್ರಃ ಶ್ರಾಂತಶ್ಚ ನಿರ್ಯತ್ನಃ ಸೋಽಭವತ್ತತಃ ॥ ೩೪

ವ್ಯಾದಿತಾಸ್ಯೋ ಮಹಾರೌದ್ರಃ ಸೋಽಸುರಃ ಕೃಷ್ಣಬಾಹುನಾ ।
ನಿಪಪಾತ ದ್ವಿಧಾಭೂತೋ ವೈದ್ಯುತೇನ ಯಥಾ ದ್ರುಮಃ ॥ ೩೫ ॥

---

೩೨. ಎಲೈ ಬ್ರಾಹ್ಮಣೋತ್ತಮರೇ, ಆಪ್ತರಾದವರಿಂದ ಉಪೇಕ್ಷಿಸಲ್ಪಟ್ಟ ವ್ಯಾಧಿಯು ಶರೀರದೊಳಗೆ ಪ್ರಬಲಿಸುವಂತೆ, ಕೇಶಿಯ ಬಾಯನ್ನು ಹೊಕ್ಕ ಆ ಕೃಷ್ಣನ ನಿಡುದೋಳು ಮತ್ತಷ್ಟು ಬೆಳೆಯತೊಡಗಿತು.

೩೩. ಆಗ ಆ ಕುದುರೆಯ ತುಟಿಗಳು ಹರಿದುಹೋದುವು. ಬಾಯಿಂದ ನೊರೆನೊರೆಯಾಗಿ ರಕ್ತವು ಉಕ್ಕಿಬಂದಿತು. ದವಡೆಗಳು ಕೂಡಿರುವ ಸಂಧಿ ಭಾಗವು ಬಿಟ್ಟುಹೋಗಿ ಅವು ಅತಿಯಾಗಿ ತೆರೆದುಹೋದುವು.

೩೪. ಆಗ ಆ ಕುದುರೆಯು, ಕಾಲುಗಳನ್ನು ಚಾಚಿ ನೆಲದಮೇಲೆ ಬಿದ್ದುಬಿಟ್ಟಿತು. ಅದಕ್ಕೆ ಮಲಮೂತ್ರಗಳೂ ಆಗಿಹೋದುವು. ಮೈಯೆಲ್ಲಾ ಬೆವರಿನಿಂದ ಒದ್ದೆಯಾಯಿತು. ಬಳಿಕ ಬಹುವಾದ ಬಳಲಕೆಯಿಂದ ಅತ್ತಿತ್ತ ಅಲುಗಲೂ ಅದರ ಕೈಲಾಗಲಿಲ್ಲ.

೩೫. ಈರೀತಿ ಬಾಯಿ ತೆರೆದುಕೊಂಡು ಮಹಾಭಯಂಕರವಾಗಿ ಬಂದ ಆ ಕೇಶಿಯೆಂಬ ಅಸುರನು, ಸಿಡಿಲಿನಿಂದ ಬಡಿಯಲ್ಪಟ್ಟ ಮಹಾವೃಕ್ಷದಂತೆ ಕೃಷ್ಣಬಾಹುವಿನಿಂದ ಎರಡು ತುಂಡಾಗಿ (ನೆಲದಮೇಲೆ) ಬಿದ್ದು ಸತ್ತುಹೋದನು.

ದ್ವಿಪಾದಪೃಷ್ಠಪುಚ್ಛಾರ್ಧಶ್ರವಣೈಕಾಕ್ಷನಾಸಿಕೇ ।
ಕೇಶಿನಸ್ತೇ ದ್ವಿಧಾ ಭೂತೇ ಶಕಲೇ ಚ ವಿರೇಜತುಃ ॥ ೩೬ ॥

ಹತ್ವಾ ತು ಕೇಶಿನಂ ಕೃಷ್ಣೋ ಮುದಿತೈರ್ಗೋಪಕೈರ್ವೃತಃ ।
ಅನಾಯಸ್ತತನುಃ ಸ್ವಸ್ಥೋ ಹಸಂಸ್ತತ್ರೈವ ಸಂಸ್ಥಿತಃ ॥ ೩೭ ॥

ತತೋ ಗೋಪಾಶ್ಚ ಗೋಪ್ಯಶ್ಚ ಹತೇ ಕೇಶಿನಿ ವಿಸ್ಮಿತಾಃ ।
ತುಷ್ಟುವುಃ ಪುಂಡರೀಕಾಕ್ಷಮನುರಾಗಮನೋರಮಂ ॥ ೩೮ ॥

ಆಯಯೌ ತ್ವರಿತೋ ವಿಪ್ರೋ ನಾರದೋ ಜಲದಸ್ಥಿತಃ ।
ಕೇಶಿನಂ ನಿಹತಂ ದೃಷ್ಟ್ವಾ ಹರ್ಷನಿರ್ಭರಮಾನಸಃ ॥ ೩೯ ॥

॥ ನಾರದ ಉವಾಚ ॥

ಸಾಧು ಸಾಧು ಜಗನ್ನಾಥ ಲೀಲಯೈವ ಯದಚ್ಯುತ ।
ನಿಹತೋಽಯಂ ತ್ವಯಾ ಕೇಶೀ ಕ್ಲೇಶದಸ್ತ್ರಿದಿವೌಕಸಾಂ ॥ ೪೦ ॥

---

೩೬. ಈರೀತಿ ಕೆಳಗೆ ಬಿದ್ದ ಆ ಕೇಶಿಯ ತುಂಡಾದ ಎರಡು ದೇಹ ಭಾಗಗಳು, ಎರಡು ಕಾಲು, ಅರೆಬೆನ್ನು, ಅರ್ಧ ಬಾಲ, ಒಂದು ಕಿವಿ, ಒಂದು ಕಣ್ಣು, ಒಂದು ಮೂಗು ಇವುಗಳಿಂದ ಬಹುವಾಗಿ ಶೋಭಿಸಿದುವು.

೩೭. ಕೇಶಿಯನ್ನು ಕೊಲ್ಲುತ್ತಲೇ ಗೋಪಾಲಕರೆಲ್ಲರೂ ಸಂತೋಷದಿಂದ ಕೃಷ್ಣನನ್ನು ಮುತ್ತಿಕೊಂಡುಬಿಟ್ಟರು. ಆ ಕೃಷ್ಣನಿಗೆ ಆಗಲೂ, ದೇಹಕ್ಕೆ ಸ್ವಲ್ಪವೂ ಆಯಾಸವಾಗಿರಲಿಲ್ಲ. ಅವನು ನಗುನಗುತ್ತಾ ಅಲ್ಲಿಯೇ ನಿಂತಿದ್ದನು.

೩೮. ಬಳಿಕ ಆಶ್ಚರ್ಯಚಕಿತರಾದ ಗೋಪಿಯರೂ ಗೋಪಾಲಕರೂ ಆ ಪುಂಡರೀಕಾಕ್ಷನನ್ನು ಪ್ರೀತಿಯಿಂದ ಮನೋಹರವಾಗಿ ಸ್ತೋತ್ರವಮಾಡಿದರು.

೩೯. ಆಗ ಮೋಡಗಳ ನಡುವೆ ನಿಂತು ಕಾಳಗವನ್ನು ನೋಡುತ್ತಿದ್ದ ನಾರದಮಹರ್ಷಿಯು ಕೇಶಿಯು ಸತ್ತುದನ್ನು ಕಂಡು ಸಂತೋಷದಿಂದ ಓಲಾಡುತ್ತಾ ಕೃಷ್ಣನ ಬಳಿಗೆ ಬೇಗನೆ ಬಂದು ಈರೀತಿಯಾಗಿ ಸ್ತೋತ್ರಮಾಡಿದನು.

೪೦. ಎಲೈ ಜಗತ್ಪ್ರಭುವೇ, ದೇವತೆಗಳಿಗೂ ಕಿರುಕುಳವನ್ನು ಕೊಡುತ್ತಿದ್ದ ಆ ಕೇಶಿಯನ್ನು ಲೀಲಾಮಾತ್ರದಿಂದಲೇ ನೀನು ಕೊಂದು ಕೆಡಹಿದೆಯಲ್ಲವೇ ? ಭಾಪು ! ಭಾಪು !

ಸುಕರ್ಮಾಣ್ಯವತಾರೇ ತು ಕೃತಾನಿ ಮಧುಸೂದನ ।
ಯಾನಿ ವೈ ವಿಸ್ಮಿತಂ ಚೇತಸ್ತೋಷಮೇತೇನ ಮೇ ಗತಂ ॥ ೪೧ ॥

ತುರಗಸ್ಯಾಸ್ಯ ಶಕ್ರೋಽಪಿ ಕೃಷ್ಣ ದೇವಾಶ್ಚ ಬಿಭ್ಯತಿ ।
ಧುತಕೇಸರಜಾಲಸ್ಯ ಹ್ರೇಷತೋಽಭ್ರಾವಲೋಕಿನಃ ॥ ೪೨ ॥

ಯಸ್ಮಾತ್ತ್ವಯೈಷ ದುಷ್ಟಾತ್ಮಾ ಹತಃ ಕೇಶೀ ಜನಾರ್ದನ ।
ತಸ್ಮಾತ್ಕೇಶವನಾಮ್ನಾ ತ್ವಂ ಲೋಕೇ ಗೇಯೋ ಭವಿಷ್ಯಸಿ ॥ ೪೩ ॥

ಸ್ವಸ್ತ್ಯಸ್ತು ತೇ ಗಮಿಷ್ಯಾಮಿ ಕಂಸಯುದ್ಧೇಽಧುನಾ ಪುನಃ ।
ಪರಶ್ವೋಽಹಂ ಸಮೇಷ್ಯಾಮಿ ತ್ವಯಾ ಕೇಶಿನಿಷೂದನ ॥ ೪೪ ॥

ಉಗ್ರಸೇನಸುತೇ ಕಂಸೇ ಸಾನುಗೇ ವಿನಿಪಾತಿತೇ ।
ಭಾರಾವತಾರಕರ್ತಾ ತ್ವಂ ಪೃಥಿವ್ಯಾ ಧರಣೀಧರ ॥ ೪೫ ॥

---

೪೧. ನೀನು ಈ ಅವತಾರದಲ್ಲಿ ಮಾಡಿದ ಅನೇಕವಾದ ಅದ್ಭುತ ಕೆಲಸಗಳಿಂದ ನಾನು ಆಶ್ಚರ್ಯಗೊಂಡಿದ್ದೆನು. ಈಗಲಂತೂ ನನ್ನ ಮನಸ್ಸಿಗೆ ಬಹು ಸಂತೋಷವಾಯಿತು.

೪೨. ಕೃಷ್ಣ! ಈ ಕುದುರೆಯು ಆಕಾಶಕ್ಕೆ ಮುಖವನ್ನು ಮಾಡಿಕೊಂಡು, ತನ್ನ ಕೇಸರಗಳನ್ನು ಕೊಡುವುತ್ತಾ ಒಂದುಸಲ ಕೆನೆದರೆ, ಸಾಕು. ಇಂದ್ರಾದಿ ದೇವತೆಗಳೆಲ್ಲರೂ ಭಯದಿಂದ ತತ್ತಳಿಸಿಹೋಗುತ್ತಿದ್ದರು.

೪೩. ಎಲೈ ಜನಾರ್ದನನೇ, ಈ ದುಷ್ಟನಾದ ಕೇಶಿಯನ್ನು ಕೊಂದೆಯಲ್ಲವೇ? ಆದುದರಿಂದ ಇನ್ನುಮುಂದೆ ಕೇಶವನೆಂದು ಜಗತ್ತಿನಲ್ಲಿ ನಿನ್ನನ್ನು ಕೀರ್ತನೆಮಾಡುವರು.

೪೪. ಹೇ ಕೇಶಿನಿಷೂದನ! ನಿನಗೆ ಮಂಗಳವಾಗಲಿ. ಈಗ ಹೊರಡುವೆನು. ನಾಳಿದ್ದು ನೀನು ಕಂಸನೊಡನೆ ಹೋರಾಡುವಾಗ ನಿನ್ನೊಡನೆ ಬಂದು, ಸೇರುವೆನು.

೪೫-೪೬. ಎಲೈ ಧರಣೀಧರನೇ, ಉಗ್ರಸೇನಸುತನಾದ ಕಂಸನು ತನ್ನ ಅನುಚರರೆಲ್ಲರೊಡನೆ ಕೂಡಿ ಮಡಿದುಹೋದನಂತರ ನೀನು ಭೂಮಿಯ ಭಾರ

ತತ್ರಾನೇಕಪ್ರಕಾರೇಣ ಯುದ್ಧಾನಿ ಪೃಥಿವೀಕ್ಷಿತಾಂ ।
ದ್ರಷ್ಟವ್ಯಾನಿ ಮಯಾ ಯುಷ್ಮತ್ಪ್ರಣೀತಾನಿ ಜನಾರ್ದನ ॥ ೪೬ ॥

ಸೋಽಹಂ ಯಾಸ್ಯಾಮಿ ಗೋವಿಂದ ದೇವಕಾರ್ಯಂ ಮಹತ್ಕೃತಂ ।
ತ್ವಯಾ ಸಭಾಜಿತಶ್ಚಾಹಂ ಸ್ವಸ್ತಿ ತೇಽಸ್ತು ವ್ರಜಾಮ್ಯಹಂ ॥ ೪೭ ॥

॥ ವ್ಯಾಸ ಉವಾಚ ॥
ನಾರದೇ ತು ಗತೇ ಕೃಷ್ಣಃ ಸಹ ಗೋಪೈರವಿಸ್ಮಿತಃ ।
ವಿವೇಶ ಗೋಕುಲಂ ಗೋಪೀನೇತ್ರಪಾನೈಕಭಾಜನಂ ॥ ೪೮ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಕೃಷ್ಣಬಾಲಚರಿತೇ ಕೇಶಿವಧ ನಿರೂಪಣಂ ನಾಮ ನವತ್ಯಧಿಕಶತತಮೋಽಧ್ಯಾಯಃ

---

ವನ್ನು ಇಳಿಸುವೆ. ಆಗ ದುಷ್ಟರಾಜನೊಡನೆ ನೀನು ಮಾಡುವ ಅನೇಕ ಬಗೆಯಾದ ಯುದ್ಧಗಳನ್ನು ನಾನು ನೋಡಬೇಕಾಗಿದೆ.

೪೭. ಎಲೈ ಗೋವಿಂದನೇ! ದೇವತೆಗಳ ಮಹತ್ಕಾರ್ಯವನ್ನು ನೀನು ನೆರವೇರಿಸಿದೆ. ನಿನ್ನಿಂದ ನಾನು ಸತ್ಕೃತನಾದೆನು. ನಿನಗೆ ಮಂಗಳವಾಗಲಿ. ನಾನು ಹೊರಡುವೆನು.

೪೮. ಎಲೈ ದ್ವಿಜೋತ್ತಮರೇ, ಹೀಗೆ ಹೇಳಿ ನಾರದನು ಹೊರಡುತ್ತಲೇ, ಆ ಕೃಷ್ಣನು ಸ್ವಲ್ಪವೂ ಹೆಮ್ಮೆಪಡದೆ, ಗೋಪಾಲಕರೊಡನೆ ಹೊರಟು ಗೋಪಿಯರ ತೃಷಿತನಯನಗಳಿಂದ ಹೀರಲ್ಪಡುತ್ತಾ ಗೋಕುಲವನ್ನು ಪ್ರವೇಶಿಸಿದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಕೃಷ್ಣಬಾಲಚರಿತ್ರೆಯಲ್ಲಿ ಕೇಶಿವಧನಿರೂಪಣವೆಂಬ ನೂರತೊಂಭನೆಯ ಅಧ್ಯಾಯವು ಮುಗಿದುದು.

---